# ನಾವು ಸಾಹುಕಾರ ಕುಲದವರು

(ಏಕಾಂಕ ಪ್ರಹಸನ)

[ದ್ವಿತೀಯ ಮುದ್ರಣ]



ಕುಪ್ಪಿ ವಾಸುದೇವ ಶೆಣೈ.



1959

ನಾಲ್ಕು ಆಣೆ.

# ನಾವು ಸಾಹುಕಾರ ಕುಲದವರು

(ಏಕಾಂಕ ಪ್ರಹಸನ)

[ದ್ವಿತೀಯ ಮುದ್ರಣ]



ಕುಡ್ಪಿ ವಾಸುದೇವ ಶೆಣೈ.



1959

ನಾಲ್ಕು ಆಣೆ.

# ಈ ಪ್ರಹಸನದ ಕುರಿತು ಒಂದು ಮಾತು.

ಶಾಲಾ ವಿಶೇಷ ಸಮಾರಂಭದ ಸಂದರ್ಭದಲ್ಲಿ ಪ್ರಯೋಗಿಸುವ ಸಲುವಾಗಿ ಲಘು ಪ್ರಹಸನವೊಂದನ್ನು, ಒಂದು ಶಾಲೆಯ ಹಳೇ ವಿದ್ಯಾರ್ಥಿಗಳು ಕೇಳಿದಾಗ,—ಆ ಪ್ರಹಸನವು ಪ್ರದರ್ಶಿಸಲ್ಪಡುವ ಸ್ಥಳ, ವಾತಾವರಣ, ಪಾತ್ರವಹಿಸುವವರ ಇತಿಮಿತಿಗಳು ಇವುಗಳನ್ನು ಮನಸ್ಸಿನಲ್ಲಿಟ್ಟು, ಅದೊಂದು ತರದ ನಿರ್ಬಂಧದಲ್ಲಿ ಇದನ್ನು ಬರೆದುದಾಗಿದೆ. ಏಕಾಂಕ ಪ್ರಹಸನಗಳು ಸಣ್ಣ ಕಥೆಯಂತಿರಬೇಕು, ಪ್ರಹಸನಗಳಲ್ಲಿ ಕ್ಲಿಷ್ಟ ಪದಗಳಿಗಿಂತಲೂ ಲಘು ಶಬ್ದಗಳೇ ಇರುವುದರಿಂದ ಪ್ರಹಸನದ ಸೊಬಗು ಹೆಚ್ಚುವುದು ಮತ್ತು ಹೆಚ್ಚು ಜನರು ಅದನ್ನು ತಿಳಕೊಳ್ಳುವರು ಎಂದು ನನ್ನ ಅಭಿಪ್ರಾಯ. ಮನೋರಂಜನೆಯು ಮುಖ್ಯ ಉದ್ದೇಶವಾಗಿದ್ದರೂ, ಇಂತಹ ಲಘು ಪ್ರಹಸನಗಳು ಒಂದು ಸಂದೇಶ ಅಥವಾ ಗಂಭೀರವಾದ ಸೂಚನೆಯನ್ನೂ ಒಳಗೊಂಡಿದ್ದರೆ ಒಳ್ಳೆಯದೆಂದೂ ಅನಿಸಿತು.

ಪ್ರಹಸನಗಳಾಗಲಿ ನಾಟಕಗಳಾಗಲಿ–ನಡೆದುದನ್ನೆ ಇದ್ದಕ್ಕಿದ್ದಂತೆ ಬರೆದು ಪ್ರದರ್ಶಿಸಬೇಕೆಂಬ ಅರ್ಥವಲ್ಲ. “ಈ ರೀತಿ ನಡೆಯಿತು”ಎಂದು ಹೇಳುವಂತೆ ಅಭಿನಯಿಸಲ್ಪಡಬೇಕು; ಹಾಗಾದರೇನೆ“ಈ ರೀತಿ ಆಗಬೇಕು”ಎಂಬ ಭಾವನೆಯನ್ನು ಹುಟ್ಟಿಸುವುವು.

ಅಮುಕ ನಟರಿಗಾಗಿ ಅಮುಕ ರೀತಿಯ ಪ್ರಹಸನವನ್ನು ಬರೆದು ಕೊಡಬೇಕೆಂಬ ನಿರ್ಬಂಧವಿದ್ದಾಗ, ಬರೆಹಗಾರನ ಸ್ವಾತಂತ್ರ್ಯವು ಅಪಹೃತವಾಗುವುದು. ಅಂತಹ ನಿರ್ಬಂಧವಿಲ್ಲದೆ ಬರೆವುದಾದರೆ ಈ ನಾಟಕದ ಕೆಲವೊಂದು ಘಟನೆಗಳೂ ಸಂಭಾಷಣೆಗಳೂ ತುಸು ಮಾರ್ಪಾಟವಾಗುತಿದ್ದುವೇನೊ; ನಾಟಕವೂ ನೀಳವಾಗಬಹುದಿತ್ತು. ಈಗ ಬರೆದು ಪ್ರಕಟಿಸಿರುವ ನಾಟಕವು ಸುಮಾರು ಒಂದು ಘಂಟೆಯ ಅವಧಿಯಲ್ಲಿ ಆಡಲ್ಪಡುವಂಥದ್ದು. ಪೋಷಾಕುಗಳಿಗೆ, ದೃಶ್ಯಾವಳಿಗಳಿಗೆ ಮತ್ತು ಇತರ ವಸ್ತುಗಳಿಗೆ ಹೆಚ್ಚು ಶ್ರಮಿಸುವ ಅವಶ್ಯವಿಲ್ಲ—ಕೆಲವೇ ನಟರಿದ್ದರೆ ಸಾಕಾಗುವುದು—ಎಂಬುದಿಷ್ಟೆ ಇದರ ವೈಶಿಷ್ಟ್ಯ. ಇದೊಂದು ಅಸಾಮಾನ್ಯ ಅಥವಾ ಶ್ರೇಷ್ಠ ಕೃತಿ ಎಂಬ ಪ್ರತಿಪಾದನೆ ಯಾ ಬಾಧ್ಯತೆ ಏನೂ ಇಲ್ಲ. ಪ್ರಹಸನಗಳ ಬಗ್ಗೆ ಇರುವ ಜನರ ಆಸಕ್ತಿಯನ್ನು ಕೆಡಿಸಬಾರದು, ಕೆಲವರಾದರೂ ಇದರ ಉಪಯೋಗ ಮಾಡಿಕೊಳ್ಳಬಹುದು, ವಿದ್ಯಾಸಂಸ್ಥೆಗಳ ವರ್ಧಂತ್ಯುತ್ಸವ ಕಾಲದಲ್ಲಿ ಅಭಿನಯಿಸಲ್ಪಡಲು ಆಕ್ಷೇಪಕರವಲ್ಲ—ಎಂಬ ಭಾವನೆಯೇ ಇದು ಮುದ್ರಣವಾಗಲು ಇರುವ ಅರ್ಹತೆ ಎನ್ನುತ್ತ ಇದನ್ನು ಪ್ರಹಸನಪ್ರಿಯರ ಮುಂದಿರಿಸಿದ್ದೇನೆ

ಮಂಗಳೂರು, ತಾ. ೨೪—೧೧—೧೯೫೧.

**ಕುಡ್ಪಿ ವಾಸುದೇವ ಶೆಣೈ.**

# ಪಾತ್ರ ವಿವರ

**ಶೀಲಾ:** ಹೊಲಿಗೆಯಿಂದ ಜೀವಿಸುವ ಗೃಹಿಣಿ; ಸುಶಿಕ್ಷಿತಳು. ವಯಸ್ಸು ಸುಮಾರು ೩೯.

**ಕಾಮಾಕ್ಷಿ:** ಬಂಧುಬಳಗದವರ ಸಹಾಯದಿಂದ ಜೀವಿಸುವ ಹೆಂಗಸು; ಸಾಮಾನ್ಯ ಸುಶಿಕ್ಷಿತಳು; ವಯಸ್ಸು ಸುಮಾರು ೩೫.

**ಚಂದ್ರಾ:** ಸುಶಿಕ್ಷಿತ ಸ್ತ್ರೀ; ಪ್ರಭಾಕರನ ಹೆಂಡತಿ; ವಯಸ್ಸು ಸುಮಾರು ೩೦.

**ಚಂಪಾ:** ಸುಶಿಕ್ಷಿತ ಸ್ತ್ರೀ; ಚಂದ್ರಾಳ ಗೆಳತಿ; ವಯಸ್ಸು ಸುಮಾರು ೩೦.

**ಮಾಧವ್ಜಿ:** ಉದ್ಯೋಗವಿಲ್ಲದ ಹರಟೆಮಲ್ಲ; ವಯಸ್ಸು ಸುಮಾರು ೩೫.

**ತುಕಾಜಿ:** ,, ,, ,, ,, ೪೦.

**ಪ್ರಭಾಕರ:** ಸುಶಿಕ್ಷಿತ ಗೃಹಸ್ಥ; ವಯಸ್ಸು ಸುಮಾರು ೩೫.

---

## ದೃಶ್ಯ ೧

[ಮಾಧವ್ಜಿಯ ಮನೆಕೊಠಡಿ. ಮಾಧವ್ಜಿ, ಸುಖಾಸನ ಹಾಕಿ, ಮಂಚದ ಮೇಲೆ ಕುಳಿತಿರುವನು. ಪತ್ನಿ ಶೀಲಾ, ಧಾನ್ಯ ಬೀಸುತ್ತಿರುವಳು ]

ಮಾಧವ್ಜಿ: ಒಹೊಯ್!

ಶೀಲಾ: (ಬೀಸುವುದನ್ನು ನಿಲ್ಲಿಸಿ, ತಲೆಯೆತ್ತಿ ನೋಡಿ, ಮತ್ತೆ ತಲೆ ಕೆಳಗೆ ಹಾಕಿ ಬೀಸುವಳು.)

ಮಾಧವ್ಜಿ: ಕೇಳಿದಿಯೇನು?

ಶೀಲಾ: (ಪುನಃ ತಲೆಯೆತ್ತುವಳು.)

ಮಾಧವ್ಜಿ: ಕೊರಿಯಾದಲ್ಲಿ ಯುದ್ಧವಂತೆ!

ಶೀಲಾ: (ಪುನಃ ತಲೆ ಕೆಳಗೆ ಹಾಕಿ ಬೀಸತೊಡಗುವಳು)

ಮಾಧವ್ಜಿ: ಕೊರಿಯಾ ಎಂದರೆ ನೀನು ಸಾಮಾನ್ಯ ಎಂದು ತಿಳಿದಂತಿದೆ!

ಶೀಲಾ: ಕೊರಿಯಾ ಎಂದರೇನು?

ಮಾಧವ್ಜಿ: ಹ್ಞಾ, ಅದನ್ನೀಗ ಕೇಳು. ಹುಲಿಗಳಲ್ಲಿ ಬಂಗಾಳ ಹುಲಿ, ಖರ್ಜೂರದಲ್ಲಿ ಮಸ್ಕತಿ ಖರ್ಜೂರ, ಅಕ್ಕಿಗ

ಳಲ್ಲಿ ಜೀರಾ ಅಕ್ಕಿ ಅನ್ನುವಂತೆ ಯುದ್ಧಗಳಲ್ಲಿ ಕೊರಿಯಾ ಯುದ್ಧ ಅಂದರೆ ದೊಡ್ಡದು.

ಶೀಲಾ: (ಗಂಡನನ್ನು ತಿರಸ್ಕಾರದಿಂದ ನೋಡಿ) ಎಲ್ಲಿ ಯುದ್ಧವಾದರೂ ನಿಮಗೇನು?

ಮಾಧವ್ಜಿ: ಹುಲು ಮಾತಾಡಬೇಡ! ಕೊರಿಯಾ ಯುದ್ಧ ಪ್ರಜ್ವಲಿಸಿದರೆ ಸರ್ವನಾಶ. ನಿಮಗೆ ಹೆಂಗುಸರಿಗೆ ಅದೆಲ್ಲ ತಿಳಿಯುವುದಿಲ್ಲ.

ಶೀಲಾ: (ಗಂಡವನ್ನು ಕರುಣೆಯ ದೃಷ್ಟಿಯಿಂದ ನೋಡಿ, ಪುನಃ ಬೀಸತೊಡಗುವಳು.)

ಮಾಧವ್ಜಿ: ಒಹೊಯ್!

ಶೀಲಾ: (ತಲೆಯೆತ್ತುವಳು.)

ಮಾಧವ್ಜಿ: ನಿನ್ನೊಡನೆ ಒಂದಾಣೆ ಕಾಸು ಇದ್ದರೆ ಕೊಡು.

ಶೀಲಾ: ಇಲ್ಲ. (ಬೀಸತೊಡಗುವಳು.)

ಮಾಧವ್ಜಿ: ಇಲ್ಲ?

ಶೀಲಾ: ಇಲ್ಲ!

ಮಾಧವ್ಜಿ: ಏನು, ಅಷ್ಟು ವಸ್ತ್ರ ಹೊಲಿದು ಕೊಟ್ಟಿದ್ದೀ; ಸುಬ್ರಾಯರ ಹೆಂಡತಿ ನಿನ್ನೆ ಸಾಯಂಕಾಲ ಹಣ ಕೊಡಲಿಲ್ಲವೆ?

ಶೀಲಾ: ಇಲ್ಲ.

ಮಾಧವ್ಜಿ: ಹೇಯಶ್! ನಾನು ನಿನಗೆ ಸಾವಿರಾರು ಸಲ ಹೇಳಿದ್ದೇನೆ,— ಆ ಸುಬ್ಬರಾಯರ ಮನೆಯವರೆಲ್ಲ ಥೇಟ ಸರ್ಪದ ಸಂತಾನವೆಂದು! ಕೊಪ್ಪರಿಗೆಯ ಮೇಲೆ ಕುಳಿತು ಕೊಂಡು 'ತನಗೆ ಬೇಡ— ಪರರಿಗೆ ಬಿಡ' ಎನ್ನುವ ಜಾತಿ. ಧಾರಾಳ ಹಣ ಇದ್ದು ಪ್ರಯೋಜನವೇನು? ನೀನು ಬೆಳಗ್ಗಿಂದ ರಾತ್ರಿಯ ತನಕ ಕತ್ತೆಯಂತೆ ದುಡಿಯುತ್ತೀ,— ಅವರಿಗೆ, ನಿನ್ನ ಹಣವನ್ನು ಕಾಲ ಕಾಲಕ್ಕೆ ಕೊಡಬೇಕೆಂಬ ಪ್ರಜ್ಞೆಯೇ ಇಲ್ಲವೆಂದರೇನು? ಇನ್ನವರನ್ನು ನಂಬಬೇಡ.

ಶೀಲಾ: (ಬೀಸುತ್ತ, ತಲೆಯೆತ್ತದೆ) ಹಾಗೇಕನ್ನುತ್ತಿರಿ? ನಾನೇ ಅಗ್ರಹಪಡಿಸಲಿಲ್ಲ.

ಮಾಧವ್ಜಿ: ನೀನು ಬೆವರಿಳಿಸಿ ಶ್ರಮಿಸಿ, ನಿನ್ನ ಹಣಕ್ಕಾಗಿ ಒತ್ತಾಯವನ್ನೂ ಮಾಡಬೇಕೆ? ಹಾಳಾಯಿತು ಅವರ ಶ್ರೀಮಂತಿಕೆ! ನಾವು ಇಂತಹ ಸಾವಿರ ಕುಬೇರರನ್ನು ನೋಡಿದ್ದೇವೆ. ನಾವೂ ಸಾಹುಕಾರ ಕುಲದವರು!

ಶೀಲಾ: ಹಾಗೆ ಕಾಣುತ್ತದೆ.

ಮಾಧವ್ಜಿ: ಕಾಣದೆ ಏನು? ಇದ್ದೇವಲ್ಲಾ ಇಲ್ಲೀ!

ಶೀಲಾ: ಬಹಳ ಮಂದಿಯನ್ನು ಕೆಲಸಕ್ಕೆ ಹಚ್ಚಿದ್ದಿರೇ?

ಮಾಧವ್ಜಿ: ಅದೆಲ್ಲ ನಿನಗೆ ಹೇಗೆ ಗೊತ್ತಾಗಬೇಕು? ದಿನಕ್ಕೆ ಹತ್ತಾಳುಗಳಿಂದ ಕೆಲಸಮಾಡಿಸಿದ್ದೇವೆ. ಮಕ್ಕಳನ್ನಾಡಿಸಲಿಕ್ಕೊಬ್ಬ; ಗುಡಿಸಿದ್ದನ್ನು ಸಾಗಿಸಲಿಕ್ಕೊಬ್ಬ; ಕಾಫಿಗೊಬ್ಬ

ಅನ್ನಕ್ಕೊಬ್ಬ; ಬಳಿಸಲಿಕ್ಕೊಬ್ಬ. ಅವರೂ, ಒಬ್ಬರ ಹಣವನ್ನಾದರೂ ಬಾಕಿಯಿಟ್ಟವರಲ್ಲ. ಸಾಯಂಕಾಲವಾಗುತ್ತಲೇ ಶೆಂಡೆ ಅಥವಾ ಮುಂಡೆ ರೂಪಾಯಿಯನ್ನು ಠಣ್ ಎಂದು ಬಿಸಾಡಿದ್ದೇವೆ. ಅವರವರ ಗರ್ಜು ಅವರವರಿಗೆ!

ಶೀಲಾ: ನಮಗೇನು ಗರ್ಜು?

ಮಾಧವ್ಜಿ: ಇಲ್ಲವೇ? ಯಾವುದಕ್ಕೆ ಬೇಡ? ನೋಡು,- ಮುಖ್ಯವಾಗಿ ಒಂದಿಷ್ಟು ನಶ್ಯ ಸೇದದೆ ನನಗೆ ನನ್ನ ಮೂಗೇ ವೈರಿಯಾಗಿ ಕಂಡುಬರಲಾರಂಭಿಸಿದೆ.

ಶೀಲಾ: ನಶ್ಯವು ಅಷ್ಟೊಂದು ಅವಶ್ಯವಲ್ಲ ತಾನೆ?

ಮಾಧವ್ಜಿ: ಒಹೊಯಸ್, ನಾವು ಸಾಹುಕಾರ ಕುಲದವರು. ಇವೇ ಬೆರಳುಗಳಿಂದ ನಶ್ಯದ ಭರಣಿ-ಭರಣಿಗಳನ್ನೆ ಎತ್ತಿ ಮೂಗಿಗೆ ಸುರಿದುಕೊಂಡವರು. ನಮ್ಮ ಕುಲದವರು ಸೇದಿದ ನಶ್ಯವನ್ನು ರಾಶಿಯೊಡ್ಡಿದರೆ, ಜರ್ಮನರೋ ಇಂಗ್ಲಿಷರೋ ಗೌರಿಶಂಕರವನ್ನು ಬಿಟ್ಟು ಬಿಟ್ಟು ಈ ನಶ್ಯ ಪರ್ವತಾರೋಹಣದಲ್ಲಿ ಒಂದು ಕೈನೋಡೋಣ ಅಂತ ಬಂದಾರು. ನೀವು ಹೆಂಗಸರು—ನಿಮಗೇನೂ ತಿಳಿಯುವುದಿಲ್ಲ. ಕುಲದ ಮರ್ಯಾದೆ ಮತ್ತು ಸಂಪ್ರದಾಯದ ಮಾತದು!

ಶೀಲಾ: (ಬೀಸುವುದನ್ನು ನಿಲ್ಲಿಸಿ) ಕುಲಗೌರವವನ್ನು ನೆನೆದು ಪುಳಕಿತರಾಗುವ ನೀವು, ಸಾಹುಕಾರ ಮನೆತನದ ಅಭಿಮಾನದಿಂದ ತುಂಬಿ ತುಳುಕುವ ನೀವು, ನಿಮ್ಮ ನಶ್ಯಕ್ಕಾದರೂ ಸಾಕಾಗುವಷ್ಟು ಹಣ ಸಂಪಾದಿಸಲು ಒಂದು ಉದ್ಯೋಗ ಹುಡುಕಬಾರದೇ?

ಮಾಧವ್ಜಿ: ಏಯ್, ಏನನ್ನುವೆ ನೀನು? ಉಪಾಯ ಕಾಣದೆ ಒಂದು ಚಿಟಿಕಿ ನಶ್ಯಕ್ಕೆ ಒಂದು ಪುಡಿಕಾಸು ಕೇಳಿದ್ದಕ್ಕೆ ಮೊಗಗೆಡಿಸುವಿಯಲ್ಲ! ಇನ್ನು ಇಲ್ಲಿ ನನಗೆ ಆಸರೆಯೂ ಬೇಡ—ಆಸೆಯೂ ಇಲ್ಲ. (ಏಳುವನು) ನಾವು ಸಾಹುಕಾರ ಕುಲದವರು!

(ಚಂದ್ರಾ ಪ್ರವೇಶಿಸಿ, ನಿಲ್ಲುವಳು.)

ಶೀಲಾ: (ಮಾತಾಡದೆ ಬೀಸುವಳು.)

ಮಾಧವ್ಜಿ: ಹೆಂಗಸನ್ನು ನಂಬಿ ನಶ್ಯದ ಅಭ್ಯಾಸಮಾಡಿದವರಿಗೆ ನನ್ನದೊಂದೇ ಉಪದೇಶ— "ನಾರೀಚಿತ್ತ ನಪಶ್ಯತಿ" ಎಂದು!........ಹೋಗಲೇ? ಹೊರಟೆ! (ಹೋಗವುದಿಲ್ಲ.)

ಶೀಲಾ: ಗಂಡಸು ನಶ್ಯ ಮತ್ತು ಕ್ಷೌರಕ್ಕೆ ಸಾಕಾಗುವಷ್ಟು ಹಣವನ್ನಾದರೂ ಸಂಪಾದಿಸಬೇಕೆಂದರೆ ನಾರೀಚಿತ್ತದ ಮಾತೆಲ್ಲಿ ಬಂತು?

ಮಾಧವ್ಜಿ: ಕ್ಷೌರ? ನಮ್ಮ ಕುಲದಲ್ಲಿ ಯಾರೂ ಯಾವ ದಿನವೂ ಕ್ಷೌರ ಮಾಡಿಸಿಕೊಂಡ ರಿಕಾರ್ಡೇ ಇಲ್ಲ. ನಾವು ಪಂಚಾಂಗ ನೋಡಿಯೇ ದಿನ ಹಾಕಿದವರು. ನಾನೊಬ್ಬನು ಮಾತ್ರ ನಿನ್ನ ಮನಸ್ಸಿಗೆ ಬೇಸರ ಕೊಡಬಾರದೆಂದು ಧರ್ಮಭ್ರಷ್ಟನಾಗಿದ್ದೇನೆ!

ಶೀಲಾ: ಪಂಚಾಂಗ ನೋಡಿ ನೋಡಿ ಕ್ಷೌರವೂ ಆಯಿತು, ಪಂಚಾಂಗವೂ ಕಿತ್ತು ಹೋಯಿತಲ್ಲ!

ಮಾಧವ್ಜಿ: ಏನಿದ್! ಪಂಚಾಂಗವನ್ನು ಪಂಚಾಂಗವು ಕೇಳಲಿಲ್ಲ; ನೀನು ಅಷ್ಟು ಜರಿದಾಡುವ ಅವಶ್ಯವಿಲ್ಲ. ಪಂಚಾಂಗ ಕಿತ್ತುಹೋದರೂ ಪಂಚಪ್ರಾಣಗಳಿವೆ; ಕುಲಗೌರವ ಇಲ್ಲೇ ಇದೆ. ಮಾಗು, ಪ್ರಾಣಬಿಟ್ಟು ತಣ್ಣಗಾಗಿದೆ ಎಂದು ಸಾಲ ಕೇಳಿದಕ್ಕೆ-ಸಾಕ್ಷಾತ್ ಪ್ರಾಣಕಾಂತನಿಗೆ ಅಪಮಾನ ಮಾಡುತ್ತಿ! ಈ ಜನ್ಮದಲ್ಲಿ ನಶ್ಯ ಸೇದಲಿಕ್ಕಾಗದಂತೆ ಮಾಗಿಗೊಂದು ಇಂಜೆಕ್ಷನ್ ಕೊಡಿಸುತ್ತೇನೆ ನೋಡು. ಆ ಮೇಲೆ ನಶ್ಯಕ್ಕೆ ಹಣಕೊಡದೆ ನಿನ್ನ ಕೈತುರಿಸಲಿಕ್ಕುಂಟು. ನೀನು ಪಶ್ಚಾತ್ತಾಪ ಪಡಲುಂಟು.

ಶೀಲಾ: ಅಂಥ ಇಂಜೆಕ್ಷನ್ ಇಲ್ಲವೆಂದು ಕಾಣುತ್ತದೆ; ಇದ್ದರೆ ಒಳ್ಳೆಯದಿತ್ತು.

ಮಾಧವ್ಜಿ: ಛೀ, ಪುನಃ ಅಪಮಾನ!........ ಇದೋ ಹೊರಟೆ! (ಏಳುವನು.)

(ಚಂದ್ರಾ ಮುಂದೆ ಬರುವಳು)

ಚಂದ್ರಾ: (ಮುಂದೆ ಬಂದು) ದುಡುಕಬೇಡಿ ಮಾಧವ ರಾಯರೇ. ಏನಿದು? ಹೆಂಡತಿಯೊಡನೆ ಸಾಲವೇ?

ಮಾಧವ್ಜಿ: ಚಂದ್ರಬಾಯಿಯವರೇ? ಕುಳಿತುಕೊಳ್ಳಿ. ನಿಮ್ಮ ಮಾತಿಗೆ ಗೌರವ ಕೊಡುತ್ತೇನೆ, ನಿಂತೆ.

ಶೀಲಾ: (ಎದ್ದು ಮುಂದರಿದು) ಏನು ಚಂದ್ರಾ, ಅಪರೂಪವಾಗಿ ಈ ಬಡವಿಯ ಮನೆಗೆ ಬಂದಿಯಲ್ಲ!

ಚಂದ್ರಾ: ಯಾರು ಬಡವಿ ಶೀಲಾ, ನೀನೇ?

ಶೀಲಾ: ಮತ್ತಾರು?

ಚಂದ್ರಾ: ಬಡತನವೂ ಶ್ರೀಮಂತಿಕೆಯೂ ಹಣದ ಮೊತ್ತದಿಂದ ಅಳೆಯಲ್ಪಡುವುದಾದರೆ ನೀನು ಬಡವಿ ಅಹುದು.

ಮಾಧವ್ಜಿ: ಹಣವಿಲ್ಲದಿದ್ದರೂ ನಮ್ಮ ಮನೆತನದ ಖ್ಯಾತಿ ಒಂದೇ ಸಾಲದೇ?

ಚಂದ್ರಾ: ಹಣವು ಬರಿದಾದರೂ ಹೃದಯವು ಬರಿದಾಗ ಬಾರದಲ್ಲವೆ ಶೀಲಾ?

ಮಾಧವ್ಜಿ: ನನ್ನ ಮಟ್ಟಿಗೂ ಹಾಗೇ!

ಶೀಲಾ: ಚಂದ್ರಾ, ಈ ಉದ್ಗಾರವು ನಿನ್ನ ಹೃದಯದ ಸಂಪನ್ನತೆಯನ್ನು ಸ್ಪಷ್ಟಗೊಳಿಸುವುದು.

ಚಂದ್ರಾ: ಇಲ್ಲ, ಶೀಲಾ, ನಾನು ಒರಟು ಸ್ವಭಾವದವಳು.

ಮಾಧವ್ಜಿ: ಛೀ, ಹಾಗೇನೂ ಇಲ್ಲ, ಸ್ವಲ್ಪ ಹರಿತವಾಗಿ ಕಾಣುವಿರಿ.

ಚಂದ್ರಾ: (ಮಾಧವ್ಜಿಯ ಕಡೆ ತಿರುಗಿ) ಏನು, ನೀವು ಇನ್ನೂ ಹೋಗಿಲ್ಲವೇ?

ಮಾಧವ್ಜಿ: ನೀವು ನಿಲ್ಲಿ ಅಂದಿರಿ; ನಿಂತೆ.

ಚಂದ್ರು: ಏನೋ, ನನಗೆ ನೆನಪಿಲ್ಲ. ಇರಲಿ, ಈಗ ಹೊರಟು ಹೋಗಿರಿ ನೋಡೋಣ. ನಾವು ಬಾಲ್ಯದಿಂದಲೂ ಗೆಳತಿಯರು. ಬಹಳ ಕಾಲದ ನಂತರ ಈಗ ಒಂದುಗೂಡಿದ್ದೇವೆ. ನಾವು ಮಾತಾಡಿಕೊಳ್ಳುವ ವಿಷಯಗಳು ಬಹಳೇ ಇವೆ.

ಮಾಧವ್ಜಿ: (ಮೋರೆ ಮುರುಕಿಸಿಂದ) ಒಹೋ. ಆಗಲಿ! ಗಂಡಸರ ದುರದೃಷ್ಟ! ಹೆಂಡತಿಯೂ ಹೋಗು ಅನ್ನುತ್ತಾಳೆ-ಹೊರಗಿಂದ ಬಂದವರೂ ನಮ್ಮನ್ನೇ ಹೊರಡಿಸುತ್ತಾರೆ. ನಮ್ಮ ಅಡ್ಡಿ ಆತಂಕಗಳೇನೂ ಇಲ್ಲ. ನಾವು ಗಂಡಸರು-ಎಲ್ಲಿಗಾದರೂ ಹೋಗುತ್ತೇವೆ. ನಿಜವಾಗಿ ಹೇಳುವುದಾದರೆ ನಮಗೆ ಯಾವಾಗಲೂ ಮನೆಗಿಂತ ಮೈದಾನೇ ವಾಸಿ. ಹೊರಟೆ.

ಶೀಲಾ: ನಿಲ್ಲಿ (ಒಳಗೆ ಹೋಗಿ, ಒಂದಾಣೆ ತಂದು ಕೊಡುವಳು)

ಮಾಧವ್ಜಿ: (ಹರ್ಷವದನನಾಗಿ) ಸರಿ! ನಾನು ಬೇಗ ಬಂದೆ, ಏನು! ನೀವು ಎಷ್ಟು ಬೇಕೋ ಅಷ್ಟು ಮಾತಾಡಿಕೊಳ್ಳಿ. ನಾನು ಸರಿಯಾಗಿ ಸಾಯಂಕಾಲದ ಕಾಫಿಗೇ ಬರುತ್ತೇನೆ.

(ಹೋಗುವನು)

ಚಂದ್ರಾ: ಏನು ಶೀಲಾ, ನಿನ್ನ ಗಂಡನಿಗೆ ಇನ್ನೂ ಕೆಲಸವಿಲ್ಲವೇ?

ಶೀಲಾ: (ಅಧೋವದನಳಾಗುವಳು.)

ಚಂದ್ರಾ: ಏಕೆ ಮೌನವಾದೆ? ನನ್ನ ಪ್ರಶ್ನೆ ಅಹಿತವಾಯಿತೇ?

ಶೀಲಾ: ಅಹಿತವೇನು ಚಂದ್ರಾ? ಅವರಿಗೆಲ್ಲಿಯೂ ಇನ್ನೂ ಉದ್ಯೋಗ ದೊರೆತಿಲ್ಲ.

ಚಂದ್ರಾ: ಹಾಗೆಂದರೇನು? ಅವನು ಎಲ್ಲಿ ಯತ್ನ ಮಾಡಿರುವನು?

ಶೀಲಾ: ಅದೊಂದೂ ನನಗರಿಯದು. ಅದಿರಲಿ. ನೀನು................

ಚಂದ್ರಾ: ವಿಷಯವನ್ನು ಬದಲಾಯಿಸಬೇಡ. ನಾನು ಊಹಿಸಬಲ್ಲೆ, ಅವನು ಶ್ರಮಿಸುವ ಜೀವಿಯೇ ಅಲ್ಲ, ಸಾರೀ ವಿತ್ತದಲ್ಲಿ ತೃಪ್ತಿಪಡುವವನು.

ಶೀಲಾ: ಹಾಗನ್ನಬೇಡ. ನಾನು ಅವರ ಪತ್ನಿ.

ಚಂದ್ರಾ: ಧಾರೆ ಎರೆದಾದ ಮೇಲೆ ಹಾಗನ್ನಲೇ ಬೇಕಲ್ಲವೇ? ಕುಲ ನೋಡಿ ಕೊಟ್ಟ ಹೆಣ್ಣು! ಶೀಲಾ, ಗಂಡಸರಿಗೆ ಕೆಲಸಕ್ಕೆ ಬಾರದ—ಬುದ್ಧಿಹೀನ ಹುಡುಗಿಯನ್ನು ಲಗ್ನಮಾಡಿಕೊಟ್ಟರೆ "ಅವನ ಕುತ್ತಿಗೆಗೆ ಅವಳನ್ನು ಕಟ್ಟಿದರು" ಎನ್ನುವುದುಂಟು. ಇಲ್ಲಿ, "ಇವಳ ಕುತ್ತಿಗೆಗೆ ಅವನನ್ನು ಕಟ್ಟಿದ್ದಾರೆ." ಇಂತಹ ಸೋಮಾರಿ ಗಂಡಸರು ಎಷ್ಟಿಲ್ಲ! ಇವರನ್ನು ಹೆಂಡತಿಯೋ ಮಗಳೋ ಅನ್ನಕೊಟ್ಟು ಕಾಪಾಡಬೇಕು. ಪತಿ

ಯೆಂದೋ ಪಿಶನೆಂದೋ ಗೌರವಿಸಬೇಕು. ಆದರೂ ಅವರೇ ಯಜಮಾನರು. ದುಷ್ಟ ಚಟಗಳನ್ನು ಕಟ್ಟಿಕೊಂಡುದು ಬೇರೆ. ಒಮ್ಮೆ ಇವರ ಕೈಲಿದ್ದ ಹಣವು ಹೇಗೋ ಹೋಯಿ ತೆಂದೊಡನೆ— ಇವರು ಮತ್ತೆ ಆಜನ್ಮ ತಿರಿದುಂಬುವ ಜಂತುಗಳಾಗುವರು.

ಶೀಲಾ: ಚಂದ್ರಾ, ನಾವು ದುರಂತ ನಾಟಕಗಳನ್ನೋದುತ್ತಿಲ್ಲ. ಬಹುಕಾಲದ ನಂತರ ಭೇಟಿಯಾದ ನಾವು ಸಂತೋಷಕರ ವೃತ್ತಗಳಿದ್ದರೆ ಮಾತಾಡಲೊಲ್ಲೆ ವೇಕೆ?

ಚಂದ್ರಾ: ದುರಂತಗಳನ್ನು ಸುಖಾಂತಗಳನ್ನಾಗಿ ಮಾಡುವ ಸಲುವಾಗಿಯೇ ಮಾತಾಡುವೆವು. ನೋಡು ಶೀಲಾ- ಕಾಮಾಕ್ಷಿಯ ಮನೆಗೆ ಹೋಗಿ ಬಂದೆ........

ಶೀಲಾ: ತುಕಾಜಿಯ ಹೆಂಡತಿ?

ಚಂದ್ರಾ: ಅವಳೇ. ಅವಳ ಗಂಡನು ತುಕಾರಾಮನ ಪಾತ್ರವಹಿಸಿದ್ದಾನೆ. ಕಾಮಾಕ್ಷಿ ನಮ್ಮ ಸಂಬಂಧಿಕಳು ನೋಡು. ಮನೆತುಂಬ ಮಕ್ಕಳು. ಗಂಡನಿಗೆ ರಾಮನಾಮ- ಮತ್ತು ವಿಠ್ಠಲ ಭಜನೆ. ಕೆಲಸವಿಲ್ಲ. ನಂಟರಿಷ್ಟರ ಸಹಾಯದಿಂದ ಹೇಗೂ ಇಷ್ಟು ದಿನಗಳನ್ನು ಕಳೆದುದಾಯಿತು. ಇಂದಿನ ದಿನಗಳು ಕಷ್ಟ. ಇನ್ನು ಅವಳೇ ತನ್ನ ಗಂಡನನ್ನು ಉದ್ಯೋಗಕ್ಕೆ ಹೊಡೆದೆಬ್ಬಿಸಬೇಕು— ಎಂದು ಹೇಳಿ ಬಂದಿದ್ದೇನೆ.

ಶೀಲಾ: ಗಂಡಸು ತಾನೇ ಅದನ್ನಾಲೋಚಿಸಬೇಕು.

ಚಂದ್ರಾ: ಅವನು ಆಲೋಚಿಸದಿದ್ದರೆ ಇತರರು ಅವನನ್ನು ಕಾರ್ಯರಂಗಕ್ಕೆ ದೂಡಿಬಿಡಬೇಕು. ವಿವಾಹಿತನಾದರೆ— ಅವನನ್ನು ಸನ್ಮಾರ್ಗಕ್ಕೆ ಹಚ್ಚುವ ಹೊಣೆಯು ಪತ್ನಿಯದು.

ಶೀಲಾ: ಸ್ವರವೆತ್ತಿದರೆ ಅವರು ಪತಿಗೆ ಅಪಮಾನ ಮಾಡುತ್ತಿಯಾ—ಎನ್ನುತ್ತಾರೆ. ನನ್ನ ಕರುಳು ಕೊಯ್ದ ಹಾಗಾಗುತ್ತದೆ.

ಚಂದ್ರಾ: ಅಂತಃಕರಣವು ಎಲ್ಲರಿಗೂ ಇದೆ; ಆದರೆ, ಸೋಮಾರಿಗಳ ಬಗ್ಗೆ ಅದು ಇಲ್ಲ. ಪತಿಯನ್ನು ತಿರಸ್ಕಾರದಿಂದ ನಡೆಸಿಕೊಳ್ಳಬೇಕೆಂದು ನಾನು ಹೇಳುವುದಿಲ್ಲ—ಆದರೆ, ಕಾಠಿನ್ಯ ಮಾತ್ರ ತೋರಿಸಲೇ ಬೇಕು.

ಶೀಲಾ: ಏನು ಮಾಡಬೇಕೆನ್ನುವೆ?

ಚಂದ್ರಾ: ಏನಾದರೊಂದು ಉದ್ಯೋಗದಲ್ಲಿ ತೊಡಗದಿದ್ದರೆ ನಿನ್ನ ಮನೆಯಲ್ಲಿ ಸ್ಥಾನವಿಲ್ಲವೆನ್ನು.

ಶೀಲಾ: ಆವರು ಮತ್ತೇನು ಮಾಡುವರು? ಎಲ್ಯಾದರೂ ಆತ್ಮಹತ್ಯೆ.......

ಚಂದ್ರಾ: ಆ ಮಾತು ಬಿಡು. ಹೆಂಡತಿಯ ದುಡಿಮೆಯ ಅನ್ನ ಉಣ್ಣುವ ಗಂಡಸು ಯಾವ ದೇಶದಲ್ಲಿಯೂ ಯಾವ ಕಾಲದಲ್ಲಿಯೂ ಆತ್ಮಹತ್ಯೆ ಮಾಡಿಕೊಂಡುದಿಲ್ಲ.

ಏಕೆಂದರೆ, ಅವನಿಗೆ ಆತ್ಮವಿಲ್ಲ. ನೀನು, ನಿನ್ನ ಪತಿಯು ನಶ್ಯದ ಚಟಕ್ಕೂ ನಿನ್ನ ಕಾಯುಕಷ್ಟದ ಹಣವನ್ನು ತೆರಬೇಕೆ? ನಿಷ್ಠೂರವಾಗಿ ನಡೆಕೊಳ್ಳು. ಸಂಪಾದನೆಗೆ ಯತ್ನಮಾಡದೆ ಅನ್ನಕೊಡಬೇಕೆಂದರೆ, ಅವನೇನು ಅಂಗಹೀನನೇ?

ಶೀಲಾ: ಇನ್ನೂ ನಿಂತಿರುವೆಯಲ್ಲ! ಕುಳಿತುಕೊಳ್ಳಬಾರದೇ?

ಚಂದ್ರಾ: (ಕುಳಿತು) ನೋಡು, ನಿನ್ನ ಪತಿಯು, ಪ್ರತಿಭೆಯಿದ್ದರೂ ಕೆಲಸಗಳ್ಳನು. ಇದರಿಂದ ನಿನ್ನ ಸಂಸಾರವು ನಿಸ್ಸಾರವಾಗಿದೆ. ಮೈಗಳ್ಳನು ಪತಿಯಾಗಲಿ ಪಿತನಾಗಲಿ ಪುತ್ರನಾಗಲಿ—ಅವನ ವಿಷಯವಾಗಿ ಕರುಣೆ ತೋರಬಾರದು. ಇಂದು ಕೂತುಂಬುವವರ ನಾಡು ನಮ್ಮದು. ಇವನನ್ನು ಸಲಹುವ ಯತ್ನದಲ್ಲಿ ನಿನ್ನ ಮೂಲಭೂತ ಹಕ್ಕುಗಳನ್ನೂ ನ್ಯಾಯವಾದ ಆನಂದವನ್ನೂ ಕಳಕೊಂಡಿರುವೆ. ಹೆಂಡತಿಗೆ ದುಃಖಕೊಡುವ ಹಕ್ಕು ಅವನಿಗಿಲ್ಲ. ನೀನವನನ್ನು ತಿದ್ದಲೇಬೇಕು. (ಫರದೆ)

## ದೃಶ್ಯ ೨

(ರಸ್ತೆ. ಮಾಧವ್ಜಿ ಬರುತ್ತಿರುವನು.)

ಮಾಧವ್ಜಿ: (ಸ್ವ) ಲೋಕದಲ್ಲಿ ಕಷ್ಟಗಳು ಯಾರಿಗೂ ತಪ್ಪಿದ್ದಿಲ್ಲ. ಆದರೆ, ನಮ್ಮ ಸಾಹುಕಾರ ಕುಟುಂಬದಲ್ಲಿ ಮಾತ್ರ ಎಷ್ಟೋ ತಲಾಂತರಗಳಿಂದ ಎಲ್ಲರಿಗೆ ಜನ್ಮದ ಶನಿ. ಹಣ ಧಾರಾಳ ಇತ್ತು. ಅದೇ ಶಾಪವಾಯಿತೋ ಏನೋ! ನನ್ನ ತಂದೆ–ಅಜ್ಜ–ಮುತ್ತಜ್ಜ–ಎಲ್ಲರಿಗೆ ಕೋರ್ಟ್ ಎಂದರೆ ಪ್ರಾಣ; ಹಾಗಾದ್ದರಿಂದ ಅವರ ಪ್ರಾಣಗಳೂ ಕೋರ್ಟಿನಲ್ಲಿ ಹೋದುವು. ನನ್ನ ಮುತ್ತಜ್ಜ ಯಾವುದೋ ಚಿಕ್ಕ ವ್ಯಾಜ್ಯಕ್ಕಾಗಿ ಕೋರ್ಟಿನೊಳಗೆ ಪ್ರವೇಶಿಸಿದವರು, ತಿರಿಗಿ ಹೊರಗೆ ಬರಲು ದಾರಿ ಸಿಕ್ಕದೆ ಅಲ್ಲೆ ತಮ್ಮ ಶೇಷಾಯುಷ್ಯವನ್ನು ಕಳೆದರಂತೆ. ಅವರು ಸತ್ತರೂ ಅವರ ವ್ಯಾಜ್ಯ ಮುಗಿಯಲಿಲ್ಲ. ಅವರ ನಂತರ ಪಟ್ಟಕ್ಕೆ ಬಂದ ನನ್ನ ಅಜ್ಜರು—ಅವರ ಹೆಸರು ಗೋಪಾಲ್ಜಿ ಅಂತ—ತಾವು ಕೋರ್ಟಿನೊಳಗೆ ಹೊಕ್ಕು ಗೋವಿಂದ್ಜಿ ಆಗಿ ಬಿಟ್ಟರು. ಆ ಮೇಲೆ ನಮ್ಮಪ್ಪನ ಸರದಿ. ಅವರ ಹೆಸರು ಸುರಾಜಿ; ಅವರಿಗೆ ಮೂರನೇ ಅಕ್ಷರಕ್ಕಿಂತ ಮೊದಲನೇ ಎರಡಕ್ಷರಗಳು ಮುಖ್ಯವಾಗಿದ್ದುವು. ಅವರೂ ಕೋಲೂರಿಕೊಂಡು ಹೋದರು; ತಿರಿಗಿ ಬರಬೇಕೆಂದು ಕೋರ್ಟಿನ ಒಂದು ಕಿಟಕಿಗೆ ತಲಪುವಾಗ ಅಲ್ಲೆ ಪಟ್ಟೆಪಂಚೆ ಸಹಿತ ಪ್ರಾಣಬಿಟ್ಟರು. ನಾನಾಗ ಚಿಕ್ಕ ಹುಡುಗ. ನನ್ನನ್ನು ಅಭಿಮನ್ಯು ಎಂದು ಅನೇಕರು ಗೌರವಿಸುತಿದ್ದರು. "ಕೋರ್ಟ್ ಎಂದರೆ ಚಕ್ರವ್ಯೂಹ; ಅದರೊಳಗೆ ಹೊಕ್ಕವನು ತಿರಿಗಿ ಬರಲಾರ—ಈ ಅಭಿಮನ್ಯು ಈಗ ಪ್ರಾಣಬಿಡಲು ಹೋಗುತ್ತಾನೆ" ಅನ್ನುತ್ತಿದ್ದರು. ನನಗೆ ಕೇಳಿಸಿತು. ನಾನು ಸ್ವಲ್ಪ ವಿದುಳನ್ನು ಉಪಯೋಗಿಸಿದೆ.

ನ್ಯಾಯಸ್ಥಾನದಲ್ಲಿ ಲಾಯರರ ಕುರ್ಚಿಗಳ ಹಿಂದೆ ಪರಂಧಾಮವನ್ನೈದುವುದು ಭೂಷಣವಲ್ಲ; ಮತ್ತೆ ತಿರಿಗಿ ಕಕ್ಷಿಗಾರರಾಗಿ ಹುಟ್ಟುತ್ತಾರೆ. ಸೈ! ನಾನು ಕೋರ್ಟಿಗೆ ಹೋಗಲೇ ಇಲ್ಲ. ನಾನು ಸಾಯುವ ಬದಲು ತೊಂಭತ್ತು ವರ್ಷ ವಯಸ್ಸಾದ ಆ ವಯೋವೃದ್ಧ ವ್ಯಾಜ್ಯವೇ ಸತ್ತುಹೋಯಿತು. ಅಂದರೆ, ನಾನು ಹೋಗೋದಿಲ್ಲ ಅಂದದ್ದೇ ತಡ—ವ್ಯಾಜ್ಯ ತನಿಖೆಗೆ ತೆಗೆದರು–ಶಿವ್ಯಾಡಿಕ್ರಿಯಾಯಿತು. ಈ ಅಭಿಮನ್ಯುವಿನ ಪಿತ್ರಾರ್ಜಿತ ಸೊತ್ತೆಲ್ಲ ಸ್ವಾಹಾ ಅಯಿತು. ಅಂತೂ, ಹೋರಾಡದಿದ್ದರೂ ಕೈಕಾಲು ಕಳಕೊಂಡು, ಅಭಿಮನ್ಯುವಿನಂತೇ ಆಗಿದ್ದೇನೆ.

(ಇನ್ನೊಂದು ಬದಿಯಿಂದ ತುಕಾಜಿಯ ಪ್ರವೇಶ: ಕರಿನಾಮ; ಕಾವಿ ಶರ್ಟು.)

ತುಕಾಜಿ: ನಮಸ್ಕಾರ, ನಮಸ್ಕಾರ ಮಾಧವ್ಜಿಯವರೇ.

ಮಾಧವ್ಜಿ: ನಮಸ್ಕಾರ ತುಕಾಜಿ. ಎಲ್ಲಿಗೆ ಹೊರಟಿರಿ?

ತುಕಾಜಿ: ಪ್ರಭಾಕರರಾಯರ ಮನೆಗೆ ಹೋಗಿದ್ದೆ. ಈಗ, ನಮ್ಮ ಗುಡಿಸಲಿಗೆ ನಡೆಯೋದು.

ಮಾಧವ್ಜಿ: ಪ್ರಭಾಕರರಾಯರಲ್ಲೇನು, ಭಜನೆಯೋ? ಅವರ ಹೆಂಡತಿ ಈಗ ತಾನೆ ನಮ್ಮ ಮನೆಗೆ ಬಂದಿದ್ದರು.

ತುಕಾಜಿ: ಭಜನೆಯೂ ಇಲ್ಲ, ಭೋಜನವೂ ಇಲ್ಲ; ಬೋಧನೆ ಇತ್ತು.

ಮಾಧವ್ಜಿ: ನನಗರ್ಥವಾಗಲಿಲ್ಲ.

ತುಕಾಜಿ: ನನಗೂ ಆಗಲಿಲ್ಲ. ಅವರು ಕರೆಯು ಕಳುಹಿದ್ದರು.—ಎಂದು ಹೋದರೆ, ಅವರ ಆಟವೇ ಬೇರೆ.

ಮಾಧವ್ಜಿ: ಏನು?

ತುಕಾಜಿ: ಅದನ್ನು ಕೇಳಿದರೆ ನೀವು ಅವರ ಮೇಲೆ ಉರಿ ಕಾರುವಿರಿ. ನಾನು ಭಜನೆ ಮಾಡುತ್ತಿರುವುದೇಕೆ ಅಂತ ಅವರ ಪ್ರಶ್ನೆ. ಯೌವನದ ಚೈತನ್ಯವನ್ನು ಹಾಳುಮಾಡುವುದೇಕೆ ಎಂದು ಅವರಿಗೆ ಚಿಂತೆ. ನಾನೊಂದು ಉದ್ಯೋಗ ಹುಡುಕಬೇಕೂ ಅಂತ ಅವರ ವಿಜ್ಞಾಪನೆ.

ಮಾಧವ್ಜಿ: (ಕೋಪದಿಂದ) ಅಷ್ಟೊ ಅಪಮಾನ ಮಾಡಿದರೇ? ಏ ತುಕಾಜೀ, ಅವರ ಹೆಂಡತಿ ಈಗತಾನೆ ನಮ್ಮ ಮನೆಗೆ ಬಂದಿದ್ದರು. ಇದು ನನಗೆ ಮೊದಲೇ ತಿಳಿದಿದ್ದರೆ ಅವರೊಡನೆ ನಾಲ್ಕು ಮಾತು ಹೇಳಿಬಿಡುತಿದ್ದೆ.

ತುಕಾಜಿ: ಅವರಿಗೆ ಉತ್ತರ ನಾನೇ ಹೇಳಿ ಬಂದೆ—"ನೀನ್ಯಾಕೋ ನಿನ್ನ ಹಂಗ್ಯಾಕೋ" ಎಂದು. ಮಾಧವ್ಜಿ, ಪುರಂದರ ದಾಸರ ಆ ಹಾಡಿನ ಮಹಿಮೆ ಗೊತ್ತಿದೆಯೆ?

ಮಾಧವ್ಜಿ: ಅದಕ್ಕೆ ಮಹಿಮೆ ಇದೆಯೆ?

ತುಕಾಜಿ: ಧಾರಾಳ ಇದೆ. ಆ ಪದ ಹೇಳಿ ಒಮ್ಮೆ ರಂಗಪ್ಪನವರನ್ನು ಕಿಡಿ ಕಿಡಿಯಾಗುವಂತೆ ಮಾಡಿದ್ದೇನೆ. 'ನಿನ್ನಹಂಗ್ಯಾಕೋ ರಂಗಾ-ನಾಮದ ಬಲವೊಂದಿದ್ದರೆ ಸಾಲದೇ

ಎಂದು ತಿರಿಗಿ ತಿರಿಗಿ ಹೇಳಿದ್ದೇ—ಬಂತಯ್ಯಾ ರಂಗಪ್ಪನವರಿಗೆ ಕೋಪ! ತಕ್ಷಣ ಹಾಡು ನಿಲ್ಲಿಸೆಂದು ಇಂಗ್ಲಿಷಿನಲ್ಲಿ ಅಪ್ಪಣೆ ಕೊಟ್ಟುಬಿಟ್ಟರು.

ಮಾಧವ್ಜಿ: ಹ್ಞಾ?

ತುಕಾಜಿ: ಶಟಪ್ ಎಂದು! ಮಾಧವ್ಜಿ, ಅವರಿಗೆ ಅಷ್ಟು ಕೋಪ ಬಂತೇಕೆ ಗೊತ್ತೇ? ರಂಗಪ್ಪನವರು ಸಿಕ್ಕಿದವರಿಗೆ ನಾಮ ಹಾಕಿ ಸಾವ್ಕಾರರಾದವರು.

ಮಾಧವ್ಜಿ: ಅವರು ಸಾವ್ಕಾರರೇ?

ತುಕಾಜಿ: ಅಹುದು, ಸಾವ್ಕಾರರು. ಸಾವಿರ ಮಂದಿಗೆ ಖಾರ ಕೊಟ್ಟರೆ ಸಾವ್ಕಾರರಾಗುತ್ತಾರೆ.

ಮಾಧವ್ಜಿ: ಹಾಗಾದರೆ, ನಾನೊಬ್ಬ ಅಪಮಾನದಿಂದ ಬದುಕಿದ ಹಾಗಾಯಿತು. ನಾನು ಯಾರಿಗೂ ನಾಮ ಹಾಕದೆನೇ ಶುದ್ಧ ಸಾವ್ಕಾರ.

ತುಕಾಜಿ: ನೀವು ನಿಜಕ್ಕೂ ಪುಣ್ಯವಂತರು, ಭಾಗ್ಯಶಾಲಿಗಳು. ನೀವಾಯಿತು — ನಿಮ್ಮ ಮನೆಯಾಯಿತು.

ಮಾಧವ್ಜಿ: ನೀವೇನೋ ತಿಳಿದವರು-ತತ್ತ್ವಜ್ಞಾನಿಗಳು-ಹಾಗೆ ಹೇಳುತ್ತೀರಿ. ಆದರೆ, ಲೋಕಕ್ಕೆ ನಮ್ಮ ಯೋಗ್ಯತೆ ಹೇಗೆ ಗೊತ್ತಾಗಬೇಕು? ನೋಡಿ—ಸಾವ್ಕಾರ ಕುಲದವರಾದ ನಾವು ನೌಕರಿ ಮಾಡೋದು ಹೇಗೆ? ವ್ಯಾಪಾರ ಮಾಡೋಣೆಂದರೆ ಹಣವಿಲ್ಲ; ನ್ಯಾಯದ ವ್ಯಾಪಾರಗಳೂ ಇಲ್ಲ—ಎಲ್ಲ ಕಾಳಸಂತೆ.

ತುಕಾಜಿ: ಆದರೆ, ಹಣ ಮುಖ್ಯವಲ್ಲ. ಗುಣ, ಗುಣ.

ಮಾಧವ್ಜಿ: ಅಲ್ಲವೇ? ನೀವೇ ಹೇಳಿ. ಗುಣಗಳ ಮಟ್ಟಿಗೆ ನಮ್ಮಲ್ಲಿ ಯಾವುದು ಕಡಿಮೆ? ನಾವು ಏಕಪತ್ನೀ ವ್ರತಸ್ಥರು—ರಾಮಚಂದ್ರನಿಗೂ ನಮಗೂ ವ್ಯತ್ಯಾಸ ಕಡಿಮೆ. ಸುರಾಪಾನ ಮಾಡುವವರಲ್ಲ; ಭಂಗಿ ಕುಡುಕರಲ್ಲ; ಬೀಡಿ-ಸಿಗರೇಟು ಸೇದುವವರು ಕೂಡ ಅಲ್ಲ. ಯಾರೊಡನೆಯೂ ಜಗಳಾಡುವುದಿಲ್ಲ. ಅಹಿಂಸೆಯಲ್ಲಿ ಒಂದನೇ ನಂಬ್ರ. ನೋಟು ಬರಕೊಟ್ಟು ಯಾರೊಡನೆಯೂ ರೂಪಾಯಿ ಇಸಕೊಳ್ಳುವುದಿಲ್ಲ. ಕ್ರಿಮಿನಲ್ ಕೋರ್ಟು—ಸಿವಿಲ್ ಕೋರ್ಟು—ಟೆನ್ನಿಸ್ ಕೋರ್ಟು—ಹೀಗೆ ಯಾವ ಕೋರ್ಟ್‌ಶಿಪ್ಪೂ ಇಲ್ಲ. ಇನ್‌ಕಮ್ ಟೇಕ್ಸಿಗೆ ವಂಚಿಸುವವರಲ್ಲ. ಓಟಿನ ಸಮಯದಲ್ಲಿ ಓಟು ಕೊಡುತ್ತೇವೆ-ಇತರ ಸಮಯದಲ್ಲಿ ಕೊಡುವುದಿಲ್ಲ. ಗಾಂಧೀಜಿ ಇಪ್ಪತ್ತೆಂಟು ವರ್ಷಗಳಲ್ಲಿ ಬೋಧಿಸಿದ್ದೂ ಅದನ್ನೆ.

ತುಕಾಜಿ: ನಿಜಕ್ಕೂ, ಸರಕಾರದವರು, ಒಂದಂಶ ಬುದ್ಧಿ ಇದ್ದರೆ, ನಮಗೆ ಕುಲಮರ್ಯಾದೆಯ ವಾರ್ಷಿಕವೇತನವನ್ನು ಕೊಡಿಸಬಹುದಿತ್ತು.

ಮಾಧವ್ಜಿ: ಅಥವಾ, ಆಸ್ಥಾನ ಕವಿಗಳನ್ನು ನೇಮಿಸಿ ಗೌರವಿಸುವಂತೆ, "ಒಂದೇ ಒಂದು ಕಾನೂನನ್ನು ಮುರಿಯು

ದಂಥಾ ಶ್ರೇಷ್ಠವರ್ಗದ ಶಾಂತಿಪಾಲಕರು" ಎಂಬುದಾಗಿ ಗುರುತಿಸಿ, ಗೌರವಧನ ಕೊಡಿಸಬಹುದಿತ್ತು. ಆದರೆ, ತುಕಾಜೀ, ಈ ಸರಕಾರ ನಮ್ಮಂಥವರನ್ನು ಕೇಳುವುದೇ ಇಲ್ಲ. ತೀರ ಅಲಕ್ಷ್ಯ.

ತುಕಾಜಿ: ನೀವನ್ನುವುದು ಅಕ್ಷರಶಃ ನಿಜ. ನೋಡಿ, ಲಕ್ಷಗಟ್ಟಲೆ ರೂಪಾಯಿ ಖರ್ಚುಮಾಡಿಸಿ "ಪೊಲಿಟೆಕ್ನಿಕ್" ಅಂತ ಕಟ್ಟಿಸುತ್ತಾರೆ. ನಮ್ಮಂಥವರ ಬಗ್ಗೆ ಒಂದು ಕ್ಲಬ್ ಕಟ್ಟಿಸಿ ಹಾಕುವುದಿಲ್ಲ. ‘ಪೊಲಿ’ ಎಂಬ ಶಬ್ದದ ಮೇಲೆ ಸರಕಾರಕ್ಕೆ ಮಮತೆ ಹೆಚ್ಚಾದರೆ, ನಮ್ಮ ಕ್ಲಬ್ಬನ್ನು ‘ಪೊಲಿಕ್ಲಬ್’ ಎನ್ನಬಹುದಿತ್ತು. ನಮ್ಮ ಅಡ್ಡಿಯಿಲ್ಲ.

ಮಾಧವ್ಜಿ: ಇಲ್ಲ ತುಕಾಜಿ, ತೆರಿಗೆದಾರನ ಹಣವು ದುರ್ವಿನಿಯೋಗವಾಗುತ್ತಿದೆ. ಜಗತ್ತು ವಿನಾಶದ ದಾರಿ ಹಿಡಿದಿದೆ. ಸತ್ಯವು ಮಾಯವಾಗುತ್ತಿದೆ.

ತುಕಾಜಿ: ನಮ್ಮಂತೆ ತರತರದ ನಿರುಪದ್ರವಿ ನಿರುದ್ಯೋಗಿಗಳನೇಕ ಇದ್ದಾರೆ. ಅವರಿಗೆಲ್ಲ ಒಂದು ಪೊಲಿಕ್ಲಬ್ ಇದ್ದರೇನು? ಪೋಲಿಸರಿಗೆ ಕೂಡಾ ಕ್ಲಬ್ ಇದೆ. ಕ್ಲಬ್ಬುಗಳು ನಿಜಕ್ಕೂ ಉದ್ಯೋಗವಿದ್ದವರಿಗೆ ಬೇಕಿಲ್ಲ. ಹಗಲೂ ರಾತ್ರಿಯೂ ಪುರುಸೊತ್ತಿದ್ದವರಿಗೆ.

ಮಾಧವ್ಜಿ: ಮತ್ತೆ ಅಣೆಕಟ್ಟು ಕಟ್ಟಿಸುತ್ತಾರಂತೆ. ಈ ಹುಚ್ಚು ಉಂಟೇ ತುಕಾಜಿ? ನಾನು ಕೇಳೋದು—"ನೀರು ಕಮ್ಮಿಮಾಡಿ-ಹೆಚ್ಚು ಹಾಲು ಕೊಡಿ" ಎಂದು! ಏನನ್ನುತ್ತಿರಿ?

ತುಕಾಜಿ: ಸತ್ಯ. ಅಣೆಕಟ್ಟಿನ ಖರ್ಚು ಕಡಿಮೆ ಮಾಡಿಸಿ ನಮ್ಮಂಥವರಿಗೆ ರೂಪಾಯಿ ಕೊಡಿಸಲಿ ನೋಡೋಣ. ನನ್ನನ್ನು ಯಾರಾದರೂ ಚುನಾವಣೆಗೆ ನಿಲ್ಲಿಸಿದರೆ, ನನ್ನ ಘೋಷಣೆ ಇಷ್ಟೆ: "ಸಾವ್ಕಾರ ಕುಲದವರಿಗೆ ಜಹಗೀರು, ಉದ್ಯೋಗವಿಲ್ಲದವರಿಗೆ ಮಾಸಿಕವೇತನ; ಸಾಧುಸಂತರಿಗೆ ಬೇಕಾದಷ್ಟು ತಾಳ-ತಂಬೂರಿಗಳು ಮತ್ತು ಮಂದಿರಗಳು."

ಮಾಧವ್ಜಿ: ನಮ್ಮ ನಶ್ಯಕ್ಕಾಗಿ ನಾವು ನಾರಿಯರ ಮುಂದೆ ಕೈಯೊಡ್ಡುವ ಕಾಲ ಬಂದಿದೆ! ಇದಕ್ಕಿಂತಲೂ ದೊಡ್ಡ ಅನ್ಯಾಯವುಂಟೆ?

ತುಕಾಜಿ: ಮಾಧವ್ಜಿ, ಇದಕ್ಕೆ ಒಂದೇ ಉಪಾಯ. ಎಂಥ ಕಠಿನ ಪ್ರಸಂಗ ಬಂದರೂ ಧೈರ್ಯಗೆಡದೆ, ಪರಮಾತ್ಮನಲ್ಲಿ ಪೂರ್ಣ ವಿಶ್ವಾಸ ಇರಿಸಿ, ಕೆಲಸಮಾಡಲು ತಿರಸ್ಕರಿಸಿ, ಸುಮ್ಮಗಿದ್ದು ಬಿಡೋದು.

ಮಾಧವ್ಜಿ: ಕೈಕೊಡಿ; ಒಪ್ಪಿದೆ. ಏನೋ! ಈ ವರೆಗೆ ನಮ್ಮನ್ನು ದೇವರು ಕಾಪಾಡಿಕೊಂಡು ಬಂದಿರುವನು. ಇನ್ನು ಕೈಬಿಡಲಾರನು.

ತುಕಾಜಿ: ನೋಡಿ, ನನ್ನ ಹೆಸರು ತುಕಾಜಿ. ಈ ಹೆಸರಿರುವಷ್ಟು ಕಾಲ ನಾನು ನಾನೇ.

ಮಾಧವ್ಜಿ: ನೋಡಿ, ನಾನು ಮಾಧವ್ಜಿ. ನಮ್ಮ—ನಿಮ್ಮ ಕುಟುಂಬಗಳಿಗೆ ‘ಜೀ’ ಎಂಬುದು ವಂಶಪಾರಂಪರ್ಯ

ನಾದುದು. ನಮ್ಮ ಹಿರಿಯರು ಗೋಪಾಲ್ಜಿ, ಸುರಾಜಿ, ಶಂಕರ್ಜಿ, ಶೀನಾಜಿ ಮುಂತಾದವರು; ನಿಮ್ಮ ಹಿರಿಯರೂ ನಾರಂಜಿ, ಗಣಪ್ಜಿ, ರಾಕಾಜಿ, ಮೋತಿಜಿ ಮುಂತಾದವರು. 'ಜೀ' ಗೌರವದ ನಾವು ಇನ್ನೊಬ್ಬರ ಮುಂದೆ ನಿಂತು 'ಜೀಯಾ' ಎನ್ನಬೇಕೆ? ಅಂತಹ ದಿನವು ಜಗತ್ತಿಗೆ ರಕ್ತದಿನವಾದೀತು!

ತುಕಾಜಿ: ಯುದ್ಧಾವೋ ತದ್ಭವತೀ ಅಂತ. ನಾವು ನಮ್ಮನ್ನು 'ಜೀ' ಎಂದೇ ಭಾವಿಸಿದ್ದೇವೆ; 'ಛೀ' ಅನ್ನಲು ಬಿಡಲಾರೆವು. ನಡೀರಿ, ನಮ್ಮ ಮನೆಗೆ ಹೋಗಿ ಕುಳಿತು ನಾಲ್ಕು ನಿಮಿಷ ಮಾತಾಡೋಣ.

(ಹೋಗುವರು)

## ದೃಶ್ಯ ೩

[ತುಕಾಜಿಯ ಮನೆಯ ಕೊಠಡಿ. ತುಕಾಜಿ—ಮಾಧವ್ಜಿಯರ ಪ್ರವೇಶ.]

ತುಕಾಜಿ: ಬನ್ನಿ ಮಾಧವ್ಜಿ, ಕುಳಿತುಕೊಳ್ಳಿರಿ.

ಮಾಧವ್ಜಿ: ಆರಾಮವಾಗಿದೆಯಪ್ಪ ನಿಮ್ಮ ಮನೆ. ಶಾಂತಿ ಇದ್ದಂತೆ ಕಾಣುತ್ತದೆ. ಎಲ್ಲವೂ ನಿಮ್ಮ ದಾಸರ ಪದಗಳ ಮಹಿಮೆಯೆಂದು ತೋರುತ್ತದೆ.

ತುಕಾಜಿ: ಮುಖ್ಯ ಅದೃಷ್ಟಬೇಕು. ನಿಮ್ಮ ಮನೆಯಲ್ಲೇನು—ಶಾಂತಿಯಿಲ್ಲವೆ?

ಮಾಧವ್ಜಿ: ಏನೋ, ಹೇಳಲಾರೆ.

ತುಕಾಜಿ: ಮಾಧವ್ಜಿ, ಶಾಂತಿ ಇರುವುದು ಕಾಂತೆಯಿಂದ. ತಮ್ಮ ಯಜಮಾನಿ ಸ್ವಲ್ಪ ಜೋರಿನವರೆಂದು ಕಾಣುತ್ತದೆ.

ಮಾಧವ್ಜಿ: ಹಾಗೇನೂ ಇಲ್ಲವೆನ್ನಿ. ಒಂದಿಷ್ಟು ಅನಾದರವಿದೆ. ತಮ್ಮ ಯಜಮಾನಿ?

ತುಕಾಜಿ: ನನ್ನವಳು ದೇವತೆ, ಒಮ್ಮೊಮ್ಮೆ ಆವೇಶ ಬಂದರೆ, ಹತ್ತಿಪ್ಪತ್ತು ಮಕ್ಕಳನ್ನು ಒಂದೇ ರಾಶಿಹಾಕಿ ಹೊಡೆದು, ಜಜ್ಜಿಬಿಡುತ್ತಾಳೆ. ಆ ಮೇಲೆ ತಿಂಡಿ ಕೊಟ್ಟು ಲಲ್ಲೆಯಾಡುತ್ತಾಳೆ. ಒಟ್ಟಾರೆ ಮೃದುಹೃದಯ—ಆವಸರ ಜಾಸ್ತಿ.

ಮಾಧವ್ಜಿ: ಹತ್ತಿಪ್ಪತ್ತು ಮಕ್ಕಳೆ? ತುಕಾಜೀ, ಯಾವ ಸಂವತ್ಸರದಲ್ಲಿ ಇಷ್ಟು ಸೈನ್ಯವನ್ನು ಸಂಗ್ರಹಿಸಿದಿರಪ್ಪಾ!

ತುಕಾಜಿ: ಅಲ್ಲ, ಒಂದು ಮಾತಿಗೆ ಹೇಳಿದೆ. ಒಟ್ಟು ಹನ್ನೊಂದು ಮಕ್ಕಳು ಅಷ್ಟೆ.

ಮಾಧವ್ಜಿ: ಅಷ್ಟು ಮಕ್ಕಳು ಹುಟ್ಟಿದ ಮೇಲೆ ತಾವು ಉದ್ಯೋಗ ಹುಡುಕುವುದೆಂದರೇನು? ಭಜನೆಯೊಂದೇ ಉಳಿದ ಮಾರ್ಗ.

ತುಕಾಜಿ: ಒಂದೊಂದು ಮಗುವೆಂದರೆ ಒಂದೊಂದು ಅವತಾರ, ಮಾಧವ್ಜಿ! ಹತ್ತು ಅವತಾರಗಳು ಶಾಲೆಗೆ ಹೋಗುತ್ತವೆ. ಹನ್ನೊಂದನೇ ಅವತಾರಕ್ಕೆ ಇನ್ನೂ ಒಂದು ವರ್ಷ. ಅದನ್ನು ನಾವು 'ಗೊಂಡೀ' ಎನ್ನುತ್ತೇವೆ.

ಮಾಧವಿ: ಅದೇಕೆ ಹಾಗೆ?

ತುಕಾಜಿ: ಮುದ್ದಿನ ಹೆಸರು. ಒಬ್ಬಳು ಚತ್ತಿ, ಮತ್ತೊಬ್ಬಳು ಕತ್ತಿ, ಮೂರನೆಯವಳು ತಿತ್ತಿ, ನಾಲ್ಕನೆಯವಳು ಲತ್ತಿ........

ಮಾಧವಿ: ತಮಗೆ ಗಂಡು ಮಕ್ಕಳಿಲ್ಲವೆ?

ತುಕಾಜಿ: ಗಂಡನ್ನು ನನ್ನಾಕೆ ಹೆತ್ತಿಲ್ಲ. ಇನ್ನು ಹೆರುವ ಸಂಭವ ಉಂಟು.

ಮಾಧವಿ: ಇನ್ನೂ ಹೆರುವುದೇ?

ತುಕಾಜಿ: ಏನಾಯಿತಂದಿರಿ? ಅವಳಿಗಿನ್ನೂ ಮೂವತ್ತನಾಲ್ಕು ವರ್ಷ ಪ್ರಾಯ.

ಮಾಧವಿ: ಹಂ! ಇರಲಿ. ಚತ್ತಿ-ಕತ್ತಿ ಎಂದರೇನು?

ತುಕಾಜಿ: ಚತ್ತಿ ಅಂದರೆ ಚಂಪಾವತಿ; ಕತ್ತಿ ಅಂದರೆ ಕಲಾವತಿ; ತಿತ್ತಿ ಅಂದರೆ ತಿಲಾವತಿ; ಲತ್ತಿ ಅಂದರೆ ಲೀಲಾವತಿ; ಜಾತ್ತಿ ಅಂದರೆ ಜ್ವಾಲಾವತಿ, ಮಾತ್ತಿ ಅಂದರೆ ಮಾಲಾವತಿ; ಉತ್ತಿ ಅಂದರೆ ಉಮಾವತಿ; ಶಿತ್ತಿ ಅಂದರೆ ಶೀಲಾವತಿ; ನಿತ್ತಿ ಅಂದರೆ ನೀಲಾವತಿ; ಗುತ್ತಿ ಅಂದರೆ ಗುಣವತಿ. ಈ ದಶಾವತಾರಗಳು ಪೂರ್ಣವಾಗುತ್ತಲೇ ನನ್ನ ಯಜಮಾನಿಗೆ ಸ್ವಲ್ಪ ಸಂಶಯ ಬಂತು. ಈ ಪ್ರಾಸವನ್ನು ಬಿಟ್ಟರೆ ಗಂಡು ಮಗು ಹುಟ್ಟತೇ ಎಂದು,—ಹನ್ನೊಂದನೇ ಅವತಾರಕ್ಕೆ 'ಗೊಂಡಿ' ಅಂತ ಕರೆದಳು. ಇನ್ನು ನನಗೂ ವಿಶ್ವಾಸವಿದೆ-ಅವಳಿಗೂ ಧೈರ್ಯವಿದೆ. ಹನ್ನೆರಡನೇ ಅವತಾರವು ಗಂಡಾದರೆ 'ಏಕನಾಥ' ಅಂತ ಕರೆಯೋದು ಎಂದು ಖಾತರಿ ಮಾಡಿದ್ದೇವೆ.

ಮಾಧವಿ: ಹನ್ನೊಂದು ಹೆಣ್ಣು ಹುಟ್ಟಿದ ಹಾಗೇ ಹನ್ನೊಂದು ಗಂಡು ಹುಟ್ಟಿದರೆ ಏನು ಮಾಡುವಿರೋ! ದೊಡ್ಡ ಸಮಸ್ಯೆ ಇದು!

ತುಕಾಜಿ: ಸಮಸ್ಯೆ ಗಿಮಸ್ಯೆ ಒಂದೂ ಇಲ್ಲ. ಒಂದನೇ ಗಂಡಿಗೆ ಏಕನಾಥದಿಂದ ಆರಂಭಿಸಿ, ನವನಾಥ—ದಶನಾಥ-ಏಕಾದಶನಾಥದಲ್ಲಿ ಮುಗಿಸುತ್ತೇವೆ. ಹೇಗೆ?

ಮಾಧವಿ: ಆ ಏಕಾದಶದ ಮೇಲೂ ಹುಟ್ಟಿದರೆ?

ತುಕಾಜಿ: ಅನಾಥ.

ಮಾಧವಿ: (ನಿಟ್ಟುಸಿರಿಟ್ಟು) ಒಟ್ಟು ನಾತವೇ! ಇಷ್ಟು ಸಂಸಾರವಿದ್ದೂ ನೀವು ಸಂತೋಷದಲ್ಲಿರುವಿರಿ.

ತುಕಾಜಿ: ಏಳು ಮಕ್ಕಳು ಏಳು ಊರುಗಳಲ್ಲಿ, ಏಳು ಮಂದಿ ಸಂಬಂಧಿಕರಲ್ಲಿದ್ದು ಏಳು ಬಗೆಯ ಹವಾ ತಿನ್ನುತಿದ್ದಾರೆ. ಮತ್ತೆ ಇಬ್ಬರು ಶಾಲೆಗೆ ಹೋಗುತ್ತಾರೆ. ಹತ್ತನೆಯದು, ಚಿಕ್ಕದಿದ್ದರೂ ಹಾಜರಿಕೊಡದೆ ಶಾಲೆಗೆ ಹಾಜರಾಗುತ್ತಿದೆ. ಹನ್ನೊಂದನೆಯ ಮಗುವಿಗೆ ಹೊಟ್ಟೆ ತುಂಬ ಕೊಟ್ಟು ಬಿಟ್ಟರೆ ಯಾರ ಗೋಜಿಗೂ ಹೋಗುವುದಿಲ್ಲ. ಮಾಧವಿ, ನಾವು ನೋಡಿ,—ಹೆಚ್ಚಿನ ಭಾರವನ್ನು ದೇವರ ಮೇಲೆ

ಹೋಕೋದು—ಅವನೇ ಸಂಧಾರಿಸುತ್ತಾನೆ. "ತಲ್ಲಣವಗೊಳ್ಳದಿರು ಎಲೆ ಮಾನವ" ಎಂದು ದಾಸರು ಹೇಳಿದ್ದಾರೆ-ಸುಳ್ಳಲ್ಲ.

("ನಾನೊಲ್ಲೆ! ನಿನ್ನಪ್ಪನೊಡನೆ ಕೇಳು! ಕೂತಿದ್ದಾರಲ್ಲ ಕರೀನಾವು ಎಳೆದು!" ಎನ್ನುತ್ತ, ತುಕಾಜಿಯು ಹೆಂಡತಿ ಕಾಮಾಕ್ಷಿ ಪ್ರವೇಶಿಸುವಳು. ಕೈಯಲ್ಲಿ, ಬಟ್ಟೆಗಳನೊಂದು ಬುಟ್ಟಿ. ಥಟ್ಟನೆ ಬುಟ್ಟಿ ಕೆಳಗಿಟ್ಟು ದುರದುರನೆ ನೋಡುತ್ತ—)

ಕಾಮಾಕ್ಷಿ: ಕೇಳಿದಿರೇನು ಶಿತ್ರಿಯ ಮಾತ? ಎಂಟಾಣೆ ಬೇಕಂತೆ—ಸಾಲೆಗೆ! ಇನ್ನೊಬ್ಬಳಿಗೆ ನಾಲ್ಕು ತಾವು ಬಣ್ಣದ ಕಾಗದ ತರಲು ಹೇಳಿದ್ದಾರಂತೆ. ಮೂರನೆಯವಳ ಪುಸ್ತಕ ಹರಿದು ಹೋಗಿದೆ ಎಂದು ಕೂಗುತ್ತಾಳೆ! ನಾನು ನೆಟ್ಟಗೆ ಹೋಗಿ ಸಾಲೆ ಬಾವಿಗೇ ಹಾರುತ್ತೇನೆ.

ಮಾಧವ್ಜಿ: (ಅವಾಕ್ಕಾಗಿ) ತುಕಾಜೀ, ಸಾಲೆ ಬಾವಿಗೇಕೆ ಹಾರೋದು?

ತುಕಾಜಿ: ಅದು ಆಳ ಜಾಸ್ತಿ. ಬಿದ್ದರೆ, ಮೇಲೆ ತೆಗೆಯೋದು ಕಷ್ಟ.

ಮಾಧವ್ಜಿ: (ಭಯದಿಂದ) ಹರಿಹರಿ!

ಕಾಮಾಕ್ಷಿ: ಇವರ್ಯಾರು, ಹರಿಹರಿ ಎನ್ನುವ ಹರಕು ಮೋರೆಯವರು? ಎಲ್ಲಿ ಸಿಕ್ಕಿತು ಈ ವಸ್ತು ಈ ದಿನ?

ತುಕಾಜಿ: (ಮಾಧವ್ಜಿಗೆ) ಬೇಸರ ಮಾಡಬೇಡಿ. ಅವಳ ಅಂತರ್ಯವು ಕೋಮಲ. ನನ್ನಂತೇ ನನ್ನ ಸ್ನೇಹಿತರಿಗೂ ತಾಳ್ಮೆ ಹೆಚ್ಚೆಂದು ಅವಳ ಅಭಿಪ್ರಾಯ.

ಮಾಧವ್ಜಿ: ಹಂ! ಬೇಸರ-ಕೋಮಲ-ಅಭಿಪ್ರಾಯ!

ತುಕಾಜಿ: ಅವಳು ಮಾತಾಡುವ ಕ್ರಮವೇ ಹಾಗೆ!

ಕಾಮಾಕ್ಷಿ: ಏನು, ನೀವು ಈ ದಿನ ಬೇಗ ಬಂದಿರೇನು?

ತುಕಾಜಿ: ಮನೆ ಬಿಟ್ಟು ಹೊರಗೆ ತಿರುಗೋದು—ಈ ಚಳಿಗಾಲದಲ್ಲಿ ಒಳ್ಳೆಯದಲ್ಲ ಅಂತ.

ಕಾಮಾಕ್ಷಿ: ನಿಮ್ಮ ಚಳಿ ನಾನು ಬಿಡಿಸುತ್ತೇನೆ! ಇಷ್ಟು ವರ್ಷಗಳಿಂದ ಚಳಿಹಿಡಿದು, ಮರಗಟ್ಟಿಹೋದುದು ಸಾಲದೇ? ಒಂದು ಉದ್ಯೋಗ ಹುಡುಕಿರಿ ನೋಡೋಣ!

ತುಕಾಜಿ: (ಅವಾಕ್ಕಾಗಿ, ಆಸನದಿಂದೆದ್ದು) ಏ ಮಾಧವ್ಜೀ, ಇದು ಭೂಲೋಕದ ಎಂಟನೇ ಆಶ್ಚರ್ಯ!

ಮಾಧವ್ಜಿ: ಯಾವುದು, ನಾವು ಬದುಕಿರೋದು?

ತುಕಾಜಿ: ಅಲ್ಲ, ಕಾಮಾಕ್ಷಿ ಬಾಯಿಯವರ ಈ ಮಾತು! ಇವಳ ಜನ್ಮದಲ್ಲಿ ಇಂತಹ ಮಾತು ಇದೇ ಮೊದಲು!

ಮಾಧವ್ಜಿ: (ಎದ್ದು ಮುಂದುವರಿಯುತ್ತ) ನಾನು ಬರಲೇ?

ಕಾಮಾಕ್ಷಿ: ಯಾರಿವರು?

ತುಕಾಜಿ: ಮಾಧವ್ಜಿ. ನನ್ನ ಹಾಗೇ, ಸಾಧುಜನ.

ಕಾಮಾಕ್ಷಿ: ಶೀಲೆಯ ಗಂಡನೇ?

ತುಕಾಜಿ: ಅಲ್ಲ, ಶೀಲಾ ಎಂಬವಳು ಇವರ ಖಾಸಾ ಹೆಂಡತಿ.

ಕಾಮಾಕ್ಷಿ: ಸಾಕುಮಾಡಿ ಜವಾಷಿ! ಎಂಥ ಗಂಡರು ನೀವಿಬ್ಬರು? ಕೆಲಸಕ್ಕೆ ಬಾರದ ಲಂಡರು! ಕೂತುಂಬ ಭಂಡರು! ಹೆಂಡತಿಯ ದುಡಿಮೆಯನ್ನು ಕೊಳ್ಳೆ ಹೊಡೆವ ಗೂಂಡರು! ಉದ್ಯೋಗ ರಣರಂಗದಲ್ಲಿ ಪ್ರವೇಶಿಸಲಾರದ ಷಂಡರು!

ತುಕಾಜಿ: ಹೇ ಕಾಮಾಕ್ಷಿದೇವಿ! ಸ್ವಲ್ಪ ನಿಲ್ಲು. ಬಾಯಿ ಪಸೆ ಆರಿಹೋದೀತು. ನನ್ನ ಪ್ರಶ್ನೆಗೊಂದು ಉತ್ತರ ಕೊಡು. ನೋಡು,–ನೀನು ಪುರುಷನಿಗಿಂತ ಸ್ತ್ರೀ ಶ್ರೇಷ್ಠ ಎನ್ನುತ್ತಿಯೋ ಇಲ್ಲವೊ?

ಮಾಧವ್ಜಿ: ಹ್ಞಾಂ, ಜವಾಬುಕೊಡಿ!

ಕಾಮಾಕ್ಷಿ: ಹೇಳಿದರೇನಾಯಿತು?

ತುಕಾಜಿ: ಸ್ತ್ರೀಯನ್ನು ಪುರುಷನು ಶ್ರೇಷ್ಠವೆನ್ನಲೂ ಬೇಕು; ಭಂಗಾರ—ಬಟ್ಟೆ—ಊಟ ಕೊಟ್ಟು ಪೋಷಿಸಲೂ ಬೇಕು. ಅದು ಹೇಗಾದೀತು?

ಕಾಮಾಕ್ಷಿ: ಪುರುಷನೇ ಶ್ರೇಷ್ಠ ಎನ್ನುತ್ತೇವೆ. ಒಮ್ಮೆ ಉದ್ಯೋಗ ಮಾಡಿ ನೋಡೋಣ.

ತುಕಾಜಿ: ಸತ್ಯವನ್ನು ಬದಲಾಯಿಸಬೇಕೆ? ನೀವು ಶ್ರೇಷ್ಠರು ಎಂದು ನಾವು ಒಪ್ಪುತ್ತೇವೆ. ನಮ್ಮನ್ನು ಸಾಕಿ, ಸಲಹುವ ಭಾರ ಹೊತ್ತುಕೊಳ್ಳಿ ನೋಡೋಣ!

ಕಾಮಾಕ್ಷಿ: ಮಕ್ಕಳನ್ನು ಹೆರುವ ಭಾರವನ್ನೂ ನೀವು ವಹಿಸಿಕೊಳ್ಳಿರಿ.

ತುಕಾಜಿ: ಶಾಂತಂ ಪಾಪಂ! ನಾವು ನಿರ್ದಯರಲ್ಲ ಮಕ್ಕಳನ್ನು ಹೆರುವುದರಿಂದಲೇ ನಿಮಗೆ ಶ್ರೇಷ್ಠ ಸ್ಥಾನ, ತಿ ಯಿತೆ? ಆ ಸ್ಥಾನವನ್ನು ನಾವು ಕಿತ್ತುಕೊಳ್ಳುವಷ್ಟು ಕೀಳ ಹೃದಯದವರಲ್ಲ.

ಕಾಮಾಕ್ಷಿ: ಹನ್ನೊಂದು ಮಕ್ಕಳನ್ನು ಹೊತ್ತು, ಹೆತ್ತು ಸಾಕುತಿದ್ದೇನೆ. ಆ ಮೇಲೆ ನಿಮ್ಮಂಥ ಕಠಿಣಾವಾದ ಭೂತ ಕಾರದ ಮಗುವನ್ನೂ ಸಾಕುತಿದ್ದೇನೆ.

ತುಕಾಜಿ: ಅದರಲ್ಲಿ ನಿನ್ನದೇನಿದೆ? ಮುಖ್ಯ ದೇವ ಆಶೀರ್ವಾದದ ಬಲ.

ಕಾಮಾಕ್ಷಿ: ಈಗ ಶಾಪದ ಬಲದಂತೆ ತೋರುತ್ತಿದೆ.

ಮಾಧವ್ಜಿ: ತುಕಾಜೀ, ನನಗೆ ಇನ್‌ಕಮ್ ಟೇಕ್ ಆಫೀಸಿಗೆ ಹೋಗಲಿದೆ. ಬರಲೇ?

ತುಕಾಜಿ: ಏನಿದು ಕಾಮಾಕ್ಷಿ, ಈ ದಿನ ನಿನ್ನ ಅವತಾರ

ಕಾಮಾಕ್ಷಿ: ಎಷ್ಟೋ ವರ್ಷಗಳಿಂದ ಎದೆಯೊಳಗೆ ಕುದಿಯುತಿದ್ದುದು ಇಂದು ಹೊರಸೂಸಿದೆ. ಚಂದ್ರಾಬಾಯಿ ಯವರು ನನ್ನ ಕಣ್ತೆರಿದರು.

ತುಕಾಜಿ: ಚಂದ್ರಾಬಾಯಿ? ಪ್ರಭಾಕರರಾಯರ ಹೆಂಡತಿ

ಕಾಮಾಕ್ಷಿ: ಅವಳೇ!

ಮಾಧವ್ಜಿ: (ಕಳವಳದಿಂದ) ಚಂದ್ರಾಬಾಯಿಯೇ

ರಾಂ, ರಾಂ! ಹೇ ತುಕಾಜೀ, ನಾನು ಈ ದಿನ ಭೇದಿ ಔಷಧ ತೆಗೆದುಕೊಂಡಿದ್ದೇನೆ. ಹೋಗುತ್ತೇನೆ. ನಮಸ್ತೇ!

[ಹೋಗುವನು]

ಕಾಮಾಕ್ಷಿ: ಸರಿಯಾಗಿ ಕೇಳಿರಿ. ಹೆಂಡತಿಯ ದುಡಿಮೆಯ ಅನ್ನ ಉಣ್ಣುವ ಗಂಡನು ಕುನ್ನಿಗಿಂತ ಕಡೆ ಎಂದು ಚಂದ್ರಾಬಾಯಿಯವರು ಹೇಳಿದರು. ನಾನು ಒಪ್ಪಿದೆ.

ತುಕಾಜಿ: ಒಪ್ಪಿಬಿಟ್ಟೆಯಾ? ಏಕೆ?

ಕಾಮಾಕ್ಷಿ: ಏಕೆಂದರೆ,— ಶ್ವಾನವು ಕೂಡಾ ತನ್ನ ಹೆಂಡತಿಯ ಅನ್ನ ಉಣ್ಣುವುದಿಲ್ಲ. ಯಜಮಾನನು ಇಕ್ಕಿದ್ದನ್ನು ತಿನ್ನುತ್ತದೆ.

ತುಕಾಜಿ: ಅದು ಅದರ ಸ್ವಭಾವ— ಅದರಿಂದ ನಾಯಿಗೆ ಹಿರಿತನ ಹೇಗೆ ಬಂತು?

ಕಾಮಾಕ್ಷಿ: ನಾಯಿಗೆ ಹಿರಿತನ ಬರುವುದು ಮನುಷ್ಯರಿಗೆ ಕಿರಿತನ ಬಂದಾಗ! ಥೂ, ನಿಮ್ಮ ಗಂಡಸ್ತನಕ್ಕೆ ಮೂರು ಕಾಸು!

ತುಕಾಜಿ: ಗಂಡು ಎಂಬ ವಜ್ರಕ್ಕೆ ಬೆಲೆ ನಿರ್ಣಯಿಸುವ ರತ್ನಪರೀಕ್ಷಕಳು ನೀನಲ್ಲ.

ಕಾಮಾಕ್ಷಿ: ವಜ್ರ ಅಂದರೆ ಮಸಿ ಎಂದು ನೀವೇ ಒಮ್ಮೆ ಹೇಳಿರುವಿರಲ್ಲ!

ತುಕಾಜಿ: ಆದರೂ ಅದು ನಿಮಗೆ ಅತ್ಯಂತ ಪ್ರಿಯವಾಗಿದೆಯಲ್ಲಾ!

ಕಾಮಾಕ್ಷಿ: ಈಗ ಹೇಯವಾಗಿದೆ.

ತುಕಾಜಿ: ಕಾಮಾಕ್ಷಿ, ಈ ಮುನಿಸು ಏಕೆ?

ಕಾಮಾಕ್ಷಿ: ಒಡಲು ಉರಿವಾಗ, ಕೂತುಂಬ ಠಕ್ಕು ಸಂತನ ಹೆಂಡತಿ ಎಂದು ನಿಂದಕರು ಹಾಸ್ಯಮಾಡುವಾಗ ಮುನಿಸುಂಟಾಗದೇ? ಗಂಡನಿದ್ದೂ, ನನ್ನ ಮತ್ತು ನನ್ನ ಮಕ್ಕಳ— ಮತ್ತು ಗಂಡನ ಅನ್ನಕ್ಕಾಗಿ ಇತರರ ಭಿಕ್ಷೆಗೆ ಕೈಯೊಡ್ಡುತ್ತಿರುವಾಗ ಮುನಿಸುಂಟಾಗದೇ?

ತ ಕಾಜಿ: ಪ್ರತಿಯೊಬ್ಬನಲ್ಲೂ ದೋಷವಿದೆ.

ಕಾಮಾಕ್ಷಿ: ಕಾಮಾಕ್ಷಿಯ ಗಂಡ ಎನ್ನುವಾಗ ನಿಮಗೆ ದ್ವಿತೀಯ ಸ್ಥಾನವಲ್ಲವೆ? ಕಾಮಾಕ್ಷಿಯ ಮನೆ — ಕಾಮಾಕ್ಷಿಯ ಮಕ್ಕಳು ಎನ್ನುವರು. ಇಲ್ಲಿ ನೀವು ಕೂಳು ತಿಂದು ಬಿದ್ದುಕೊಳ್ಳುವ ಒಂದು ಜಂತು. ಕಾಮಾಕ್ಷಿಗೆ ಕುಂಕುಮವನ್ನಿಟ್ಟುಕೊಳ್ಳಲು ಒಂದು ಆಧಾರ. ಈ ಜೀವನವನ್ನು ಹೇಗೆ ಸಹಿಸುವಿರಿ? ಇಂದು ಸಾಯಂಕಾಲದೊಳಗೆ ನೀವು ಒಂದು ಉದ್ಯೋಗ ಹುಡುಕದಿದ್ದರೆ ಈ ಮನೆಯೊಳಗೆ ಕಾಲಿಡಕೂಡದು.

ತುಕಾಜಿ: ಹುಚ್ಚಾ! ಸಂತರಿಗೆ ಯಾರು ಕೆಲಸ ಕೊಡುತ್ತಾರೆ? ಭಜನೆಮಾಡುವ ಒಂದು ಕ್ಲಾಸು ಇದ್ದರೆ ಟೀಚರ್ ಆಗುತಿದ್ದೆ.

ಕಾಮಾಕ್ಷಿ: ಝಾಡಮಾಲೀ ಕೆಲಸವಾದರೂ ಆಗಬಹುದು, ಮಾಡಿಕೊಳ್ಳಿ.

ತುಕಾಜಿ: ಹರೇ ರಾಮ್! ಕಾಮಾಕ್ಷೀ, ಝಾಡಮಾಲೀ ಅಂದರೇನೆಂದು ನಿನಗೆ ಕಲ್ಪನೆಯಾದರೂ ಇರುವುದೇ?

ಕಾಮಾಕ್ಷಿ: ಝಾಡಮಾಲಿಯು ಉದ್ಯೋಗಶೀಲನಾದ ಪುರುಷನು. ನಿಮಗಿಂತ ಶ್ರೇಷ್ಠನು.

ತುಕಾಜಿ: ನನಗಿಂತ ಶ್ರೇಷ್ಠನೇ?

ಕಾಮಾಕ್ಷಿ: ದಾಸರ ಪದ ಹಾಡಿ ತತ್ತ್ವಜ್ಞಾನ ಬೋಧಿಸುವ ನಿಮಗೆ ಅದಿನ್ನೂ ತಿಳಿದಿಲ್ಲವೇ?

ತುಕಾಜಿ: ಇದು ಅಪಮಾನದ ಪರಮಾವಧಿ! ಶ್ವಾನವಾಯಿತು— ಝಾಡಮಾಲಿಯಾಯಿತು.......... ಕಾಮಾಕ್ಷಿ, ಬೇರೆ ಯಾವ ಉದ್ಯೋಗವೂ ಇಲ್ಲವೆ?

ಕಾಮಾಕ್ಷಿ: ಹೊರೆಹೊರುವ ಕೆಲಸವಾದೀತು — ಕಟ್ಟಿಗೆ ಒಡೆವ ಕೆಲಸವೂ ಕೆಟ್ಟುದಲ್ಲ ಅಂತೂ ಉದ್ಯೋಗ ಬೇಕೇ ಬೇಕು.

ತುಕಾಜಿ: ಇದಕ್ಕಿಂತ ಸ್ವಲ್ಪ ಒಳ್ಳೆಯ ಕೆಲಸವನ್ನೇಕೆ ನೀನು ಚಿಂತಿಸುವುದಿಲ್ಲವೊ! ಲೋಕಕ್ಕೆ ತಲೆಗೆಟ್ಟಿದೆ. ಸಾಧು ಸಂತರೂ ಕೆಲಸಮಾಡಬೇಕಂತೆ! ಮತ್ತೆ ಧರ್ಮದ ರಕ್ಷಣೆ ಮಾಡುವವರಾರು?

ಕಾಮಾಕ್ಷಿ: ಸಾಧುಸಂತರು ಲಗ್ನವಾಗುವುದೇಕೆ?

ತುಕಾಜಿ: ಹೆಣ್ಣು ಬೆಳೆದವರು ಬಿಡಬೇಕಲ್ಲ.

ಕಾಮಾಕ್ಷಿ: ಹೆಣ್ಣು ಬೆಳೆದವರು ಅಂಥರಾದರೆ, ಲಗ್ನವಾಗಲೊಪ್ಪಿದ ನಿಮ್ಮ ಕಣ್ಣುಗಳೇನಾಗಿದ್ದುವು?

ತುಕಾಜಿ: ಈಗ ತಪ್ಪುಮಾಡಿ ಆಯಿತಲ್ಲ.

ಕಾಮಾಕ್ಷಿ: ತಿದ್ದಿಕೊಳ್ಳಿ.

ತುಕಾಜಿ: ಕಾಮಾಕ್ಷಿ, ನಿಜಕ್ಕೂ ಸತ್ಯವು ನಾಶವಾಯಿತು.

ಕಾಮಾಕ್ಷಿ: ಸೋಮಾರಿಯು ಜನನವೆತ್ತಿದ ದಿನವೇ ಅದು ಸತ್ತು ಹೋಗಿದೆ.

ತುಕಾಜಿ: ನಾನು ಕಾಶಿಗೆ ಹೋಗುತ್ತೇನೆ.

ಕಾಮಾಕ್ಷಿ: ಕಾಶಿಗೆ ಹೋದರೂ ಸರಿಯೆ.—ನೀವು ನಿಮ್ಮ ಕೈಯಿಂದ ನಾಲ್ಕಾಣೆ ಸಂಪಾದಿಸಿದ್ದಿರಿ ಅಂತ ನಾನು ಕೇಳಬೇಕು.

ತುಕಾಜಿ: ಇರಲಿ. ನನಗೆ ಈಗ ಒಮ್ಮೆ ಬಡಿಸು. ಆ ಚಂದ್ರಾ ಗಂಡ — ಪುರುಷಕುಲಕುಠಾರ—ಶಾಂತ ಸ್ವಭಾವೀ ಪತಿಮಹಾನುಭಾವರ ಕುಲವೈರಿ ಪ್ರಭಾಕರರಾಯರು ಮೊದಲೇ ನನ್ನನ್ನು ದಣಿಸಿದ್ದರು. ಅವರ ಪತ್ನಿ ಮೇಲೆ ಎಲುಬು ಮುರಿದುಬಿಟ್ಟಳು.

ಕಾಮಾಕ್ಷಿ: ಆ ಪ್ರಭಾಕರರಾಯರಿಗೆ ನನ್ನದೊಂದು ಬಿರುದು ಇದೆ—ಭಂಡು ಗಂಡುಗಳ ಗುಂಡು ಎಂದು!

ತುಕಾಜಿ: ಹೋಗಲಿ ಬಿಡು. ಕೆಟ್ಟಮಾತನ್ನು ಕಡಿಮೆ ಮಾಡಿ, ದುಷ್ಟರ ಚರಿತ್ರೆಯನ್ನೋದದೆ, ಒಂದು ಮುಷ್ಟಿ ಅನ್ನ ಉಂಡು ಮುಂದಿನ ಉಪಾಯ ನೋಡೋಣ.

ಕಾಮಾಕ್ಷಿ: ಈಗ ಬಡಿಸುತ್ತೇನೆ. ಸಾಯಂಕಾಲದೊಳಗೆ ನಿಮಗೆ ಕೆಲಸ ದೊರೆಯದಿದರೆ-ಮನೆಬಾಗಿಲೇ ತೆರೆಯೋದಿಲ್ಲ.

ತುಕಾಜಿ: ನೀನು ತೆರೆಯುದಿದ್ದರೆ ನಾನು ಒಡೆಯುವುದಿಲ್ಲ. ಹೆದರಬೇಡ. ತಂತಿ ಮೀಟಿದ ಈ ಕೈಗಳು ಕದ ಭೇದಕವಾಗಲಾರವು. ನಮ್ಮದು ಪಶುಬಲವಲ್ಲ—ದೈವಬಲ! ಬಾಗಿಲಿಗೆ ಕೈಯಿಂದ ಮುಟ್ಟದೆ, ಹೀಗೆ ನೆಟ್ಟದೃಷ್ಟಿಯಿಂದ ನೋಡಿದರೆ ಬಾಗಿಲು ಹಾರಿಹೋದೀತು! ನಿನಗೆ ನಂದನಾರನ ಚರಿತ್ರ ಗೊತ್ತಿಲ್ಲವೆಂದು ತೋರುತ್ತೆ.

ಕಾಮಾಕ್ಷಿ: ನನಗೆ ತಿಳಿದಿದೆ; ನಂದನಾರನಿಗೆ ಕರೆದವನು ಒಳಗಿನ ದೇವರು ಎಂಬುದನ್ನು ನೀವರಿತಿಲ್ಲ.

ತುಕಾಜಿ: ಹಾಗೊ? ಕೈಯಿಂದಲೇ ಒಡೆಯಬೇಕಾದರೆ, ಕಟ್ಟಿಗೆ ಒಡೆವ ಕೆಲಸ ಆರಂಭವಾದ ಮೇಲೆ ನೋಡೋಣ.

ಕಾಮಾಕ್ಷಿ: ಕೆಲಸ ಆರಂಭಿಸಿದರೆ, ಬಾಗಿಲೊಡೆವ ಆವಶ್ಯಕತೆ ಇಲ್ಲ ತಾನೆ?

ತುಕಾಜಿ: ಕೊನೆಗೂ ನೀನೇ ಗೆದ್ದೆ—ಅಲ್ಲವೆ?

(ಫರದೆ)

## ದೃಶ್ಯ ೪

[ರಸ್ತೆ: ಮಾಧವ್ಜಿಯ ಪ್ರವೇಶ]

ಮಾಧವ್ಜಿ: (ಸ್ವ) ತುಕಾಜಿಯ ಗೃಹದೊಳಗಿನ ಶಾಂತಿಯನ್ನು ನೋಡಿದ ಹಾಗಾಯಿತು. ಈಗ ನನಗೆ ಎದೆ ಡವಡವ ಅನ್ನತೊಡಗಿದೆ. ಆ ಚಂದ್ರಾಬಾಯಿಯು ನಮ್ಮವಳಿಗೂ ತಲೆಗೆ ಮದ್ದು ಹಾಕಿ ಹೋದಳೋ ಅಂತ! ನಮ್ಮ ಜೀವನದಲ್ಲಿ ಒಮ್ಮಿಂದೊಮ್ಮೆ ತುಫಾನು ಎದ್ದಂತೆ ತೋರುವುದು. ನಾವು ಯಾರಿಗೂ ತೊಂದರೆ ಕೊಟ್ಟವರಲ್ಲ. ಆದರೂ—ನಮ್ಮಂಥ ಶಾಂತಜೀವಿಗಳ ಮೇಲೆ ಕೆಲವು ದುಷ್ಟರಿಗೆ ಕಣ್ಣು ಬಿದ್ದಿದೆಯಲ್ಲ!

[ಹೋಗುವನು]

[ಇನ್ನೊಂದು ಕಡೆಯಿಂದ ಪ್ರಭಾಕರ ರಾಯರು ಮತ್ತು ತುಕಾಜಿಯ ಪ್ರವೇಶ.]

—ಬಂದರು. ಬೆಂಬತ್ತಿ ಇಲ್ಲಿಗೂ ಬಂದರು ಈ ಪ್ರಭಾಕರ ರಾಯರು! ಜತೆಯಲ್ಲಿ ತುಕಾಜಿಯೂ ಸೇರಿದ್ದಾನೆ. (ಒಂದು ಬದಿಯಲ್ಲಿ ಅಡಗುವನು.)

ತುಕಾಜಿ: ಅಲ್ಲ—ನಮ್ಮ ಸಂಸಾರವನ್ನು ಕೆಡಿಸಲು ನಿಮಗೇನು ಹಕ್ಕು ಅಂತ! ಭಜನೆಮಾಡಬೇಕೂ ಅಂತ ನಾನು ನಿಮಗೆ ಹೇಳುವುದಿಲ್ಲ. ಮಾಡಬೇಡ ಅಂತ ನನಗೆ ಹೇಳಬೇಡಿ. 'ನಿನ್ನ ಗಂಡನು ಉದ್ಯೋಗಮಾಡಿದರೆ ಅವನನ್ನು ಹೊರಗೆ ಹಾಕು' ಅಂತ ನನ್ನ ಹೆಂಡತಿ ನಿಮ್ಮ ಹೆಂಡತಿಗೆ ಉಪದೇಶಿಸಲಿಲ್ಲ—ಆದರೂ ನಿಮ್ಮ ಹೆಂಡತಿ ಉಲ್ಟಾ ಹೇಳಲಿಕ್ಕೆ ಕಾರಣವೇನೂ ಅಂತ!

ಮಾಧವ್ಜಿ: (ತೆರೆಯ ಮರೆಯಿಂದ) ಇದಾದರೆ ಪ್ರಶ್ನೆ! ತುಕ್ಕಾಜಿಯು ಪಕ್ಕಾಜಿ ಇದ್ದಾನೆ!

ಪ್ರಭಾಕರ (ನಗುತ್ತ) ತುಕಾಜಿ, ಪ್ರಶ್ನೆಯು ಯಾವಾ

ಗಲೂ ಹುಚ್ಚಾಗಿರಬಾರದು. ನೀವು ನಿಸರ್ಗವೇ ತಪ್ಪೆಂದು ವಾದಿಸಲಿಕ್ಕೆ ಹೊರಟಂತಿದೆ ನಾನು ಹಕ್ಕಿನಿಂದ ಏನನ್ನೂ ಮಾಡಿಲ್ಲ. ಬಂಧುಪ್ರೇಮದಿಂದ ಮಾಡಿರುತ್ತೇನೆ. ನಮಗೂ-ನಿಮಗೂ ಸಂಬಂಧವೂ ಇದೆ. ನಾನು ಸಮಾಜಸುಧಾರಕನೂ ಅಲ್ಲ—ರಾಜಕೀಯ ಮುಖಂಡನೂ ಅಲ್ಲ ನಾನೊಂದು ಸಾಮಾನ್ಯ ವ್ಯಕ್ತಿ. ನಮ್ಮ ಕುಟುಂಬದಲ್ಲೂ ಹಲವರು ಸೋಮಾರಿಗಳಿದ್ದುದನ್ನು ಕಂಡ ಕೇಳಿ ಅನುಭವಿಸಿದವನು. ಸೃಷ್ಟಿಯನ್ನೊಮ್ಮೆ ನೋಡಿ. ಅದು ಸದಾ ಉದ್ಯೋಗಶೀಲವಾಗಿದೆ. ನಿಸರ್ಗವು ಅರೆ ನಿಮಿಷವಾದರೂ ತಟಸ್ಥವಾದರೆ ಈ ಲೋಕವೇ ಉಳಿಯದು. ಮನುಷ್ಯನೂ ಹಾಗೆಯೇ. ಜೇನ ನೊಣವನ್ನಾದರೂ ನೋಡಿ ಕಲಿಯಿರಿ.

ತುಕಾಜಿ: ಅದನ್ನು ಮಾತ್ರ ಹೇಳಬೇಡಿ: ಜೇನುನೊಣಗಳಲ್ಲಿ ರಾಣಿ ಹುಳ ಅಂತ ಇಲ್ಲವೇ?

ಮಾಧವಿ: (ತೆರೆಯ ಮರೆಯಿಂದ) ಭೇಷ್! ಒಳ್ಳೇ ಪ್ರಶ್ನೆ! ಇದಕ್ಕೆ ಪ್ರಭಾಕರ ರಾಯರು ಉತ್ತರ ಕೊಟ್ಟರೆ ಖಂಡಿತವಾಗಿ ನಾನು ಉದ್ಯೋಗಿಯಾಗುತ್ತೇನೆ.

ಪ್ರಭಾಕರ: ಏನು, ನೀವು ರಾಣಿ ಹುಳವಾಗಲಿಚ್ಛಿಸುವಿರಾ? ಆ ಸಾಮ್ಯವು ನಿಮಗೊಪ್ಪುವುದಿಲ್ಲ. ಶ್ರೀಮಂತಿಕೆಯಲ್ಲೋಲಾಡುತ್ತ, ಬೊಜ್ಜು ಬೆಳೆದ ಸೋಮಾರಿ ಗೃಹಿಣಿಗೆ ಒಪ್ಪುವ ಮಾತದು! ನೀವು ಗಂಡಸು!

ಮಾಧವಿ: (ತೆರೆಯ ಮರೆಯಿಂದ) ಇಲ್ಲ ಲೋಕ ಹಾಳಾಗಿದೆ! ಒಳ್ಳೇ ಪ್ರಶ್ನೆಯನ್ನು ಈ ಪ್ರಭಾಕರ ರಾಯರು ಹಾಳುಮಾಡಿ ಬಿಟ್ಟರು. ನಾನಿಲ್ಲಿ ನಿಲ್ಲಲಾರೆ! (ಹೋಗುವನು)

ತುಕಾಜಿ: ಎಲ್ಲರೂ ಉದ್ಯೋಗ ಮಾಡು ಅಂತಾರೆ. ತೆಗೆಸಿ ಕೊಡುವವರಿಲ್ಲ.

ಪ್ರಭಾಕರ: ಕಾರ್ಯೋತ್ಸಾಹಿಗೆ ಸಹಾಯಮಾಡುವವರು ಸಾವಿರ ಮಂದಿ ಇದ್ದಾರೆ.

ತುಕಾಜಿ: ನನ್ನಂಥವರು ಏನು ಮಾಡಬಹುದು?

ಪ್ರಭಾಕರ: ನಿಮ್ಮ ಶಿಕ್ಷಣ, ನಿಮ್ಮ ಶಕ್ತಿ, ನಿಮ್ಮ ಮೆಚ್ಚುಗೆ ಯಾವುದೋ ಅದನ್ನು ಹೊಂದಿಕೊಂಡು ಮಾಡಬಹುದು.

ತುಕಾಜಿ: (ತುಸು ಆಲೋಚಿಸಿ) ನೋಡಿ;—ನನಗೆ, ಎಲ್ಲಾದರೂ ಸಭೆ ಕೂಡಿದಾಗ ನಡುವೆ ಹೋಗಿ ಸುತ್ತು ಸುತ್ತು ತಿರುಗಿ, “ಕೂತುಕೊಳ್ಳಿ ಕೂತುಕೊಳ್ಳಿ” ಎಂದು ಜನರನ್ನು ಕೂಡ್ರಿಸುವ ಒಂದು ಕೆಲಸ ಸಿಕ್ಕಿದರೆ ಸುಲಭವಾಗುತಿತ್ತು; ಭರವಮೂ ಇದೆ.

ಪ್ರಭಾಕರ: ನೀವು ಹೇಳಿದ ಕೆಲಸವು ಕೆಲಸವಲ್ಲ. ಅದು ಸ್ವಯಂಸೇವಕನ ಕಾರ್ಯ.

ತುಕಾಜಿ: (ಪುನಃ ಅರೆ ನಿಮಿಷ ಆಲೋಚಿಸಿ) ಹಾಗಾದರೆ ಹೇಳುತ್ತೇನೆ, ಕೇಳಿ. ನನಗೆ ದೇವ-ದೈವ ಅಂದರೆ ಭಕ್ತಿ ಜಾಸ್ತಿ. ದೇವಸ್ಥಾನದಲ್ಲಿ ದೀಪ ಹಚ್ಚುವಂಥ ಕೆಲಸ ಆಗಬಹುದು.

ಪ್ರಭಾಕರ: ನಿಮ್ಮ ಮರ್ಜಿ. ಹಾಗಾದರೂ ಒಂದು ಆರಂಭ ಮಾಡಿರಿ. ಬೇಕಾದರೆ ನಾನೂ ನಮ್ಮೂರ ದೇವಸ್ಥಾನದ ಅಧಿಕಾರಿಗಳೊಡನೆ ಮಾತಾಡುವೆನು! ಅಲ್ಲಿ ದೀಪ ಹಚ್ಚಿಯಾದರೂ ನಿಮ್ಮ ಮನಸ್ಸಿನ ದೀಪವನ್ನು ಹಚ್ಚಿಕೊಳ್ಳಿ.

ತುಕಾಜಿ: ಆಗಲಪ್ಪ, ಅಂತೂ ಬಹುಕಾಲದಿಂದ ತುಕ್ಕು ಕಟ್ಟಿ ಹೋದ ದೇಹ ಈ ತುಕಾಜಿದ್ದು. ಒಮ್ಮೆಗೇ ದೊಡ್ಡ ಕೆಲಸ ಕೊಡಬೇಡಿ—ನಮಸ್ತೇ!

[ಹೋಗುವರು.]

## ದೃಶ್ಯ ೫

[ಮಾಧವ್ಜಿಯ ಮನೆಯ ಕೊಠಡಿ. ಶೀಲಾ ಗುಡಿಸುತ್ತಿರುವಳು. ಮಾಧವ್ಜಿಯ ಪ್ರವೇಶ.]

ಮಾಧವ್ಜಿ: (ಸ್ವ) ಮಾತಾಡೋದಿಲ್ಲ. ಚಂದ್ರಾಬಾಯಿಯ ಕಾರಭಾರು ಇಲ್ಲಿಯೂ ಚೆನ್ನಾಗಿ ನಡೆದಿದೆ. (ಪ್ರ) ಒಹೊಯರ್!

ಶೀಲಾ: (ತಿರುಗಿ ನೋಡಿ) ಏನು?

ಮಾಧವ್ಜಿ: ಏನಿಲ್ಲ; ಸುಮ್ಮಸುಮ್ಮನೆ ಕರೆದೆ. ನಿನಗೆ ಕೇಳಿಸ್ತದೋ ಇಲ್ಲವೋ ಎಂದು.

ಶೀಲಾ: ಅಥವಾ ನಿಮ್ಮ ಕಂಠಪರೀಕ್ಷೆ ಮಾಡಿದಿರೋ?

ಮಾಧವ್ಜಿ: ನಿನ್ನಂಥ ದೇವಿ ಇರುವಾಗ ಹಾಡುವ ಸಂತನ ಕಂಠಕ್ಕೆ ಎಣೆಯುಂಟೇ?

ಶೀಲಾ: ದೇವಿ ಭಾವಿಗೆ ಹಾರಿದಳು.

ಮಾಧವ್ಜಿ: ಹಾರಿದಳೇ? ಹಾಗಾದರೆ ಇವಳಾರು? (ಹೆಂಡತಿಗೆ ಬೆರಳು ತೋರಿಸಿ)

ಶೀಲಾ: ಇವಳು ಕೋವಿ.

ಮಾಧವ್ಜಿ: (ಸ್ವ) ಸೈ. ನಿಶ್ಚಯವಾಯಿತು! ಇಲ್ಲಿಯೂ ಉಚ್ಚಕುಲದ—ರತ್ನದಂಥಾ—ಒಂದು ಹೆಣ್ಣು ಜಾತಿಗೆಟ್ಟಿದೆ! (ಪ್ರಕಟವಾಗಿ) ಒಹೊಯರ್!

ಶೀಲಾ: ನನಗೆ ಹೆಸರಿಲ್ಲವೆ? ಒಹೊಯರ್ ಎನ್ನುತ್ತೀರೇನು?

ಮಾಧವ್ಜಿ: ಗಂಡನನ್ನು ಹೆಂಡತಿಯು ಹೆಸರೆತ್ತಿ ಕರೆಯುವುದಿಲ್ಲ. ಹೆಂಡತಿಯನ್ನು ಏಕೆ ಹೆಸರೆತ್ತಿ ಕೂಗಲಿ ಅಂತ! ಒಂದು ಹೊಸ ಪ್ರಯೋಗ. ಹೆಸರಿನಲ್ಲೇನಿದೆ? ಬೇಕಾದರೆ ನಿನ್ನನ್ನು ಪುಟ್ರಂಗೀ ಅನ್ನುತ್ತೇನೆ.

ಶೀಲಾ: ಹಾಗೆ ಕರೆದರೆ ನಿಮ್ಮನ್ನು ಶಾಣಟ್‌ರಾಮಾ ಅನ್ನುತ್ತೇನೆ.

ಮಾಧವ್ಜಿ: (ಸ್ವ) ಜೋರಾಗಿದ್ದಾಳೆ! ಅರ್ಧ ದಿನದೊಳಗೆ ಎಲ್ಲ ಕಲಿತುಬಿಟ್ಟಿದ್ದಾಳೆ ಪತಿಭಕ್ತಿ ಮಾಯವಾಗಿ ಬಿಟ್ಟಿದೆ (ಪ್ರ) ಕಾಫಿ ತಯಾರಾಗಿದೆಯೋ?

ಶೀಲಾ: ಇಲ್ಲ.

ಮಾಧವ್ಜಿ: ಸಾಯಂಕಾಲವಾಗುತ್ತಾ ಬಂತು.

ಶೀಲಾ: ಅದು ಪ್ರಕೃತಿ ನಿಯಮ.

ಮಾಧವ್ಜಿ: ಮತ್ತೆ ಕಾಫಿ ಮಾಡದೇ ಇರೋದು ಯಾವ ನಿಯಮ?

ಶೀಲಾ: ಅದು ಈ ಮನೆಯ ನಿಯಮ.

ಮಾಧವಿ: ಹುಂ! ಒಂದು ವಿಷಯ ಹೇಳುತ್ತೇನೆ, ಕೇಳು. ನಾನು ಬಹಳ ವರ್ಷಗಳ ಹಿಂದೆ-ಅಂದರೆ ನಿನ್ನನ್ನು ಲಗ್ನವಾಗುವ ಮೊದಲು - ನಾಲ್ಕೂರು ರೂಪಾಯಿ ಖರ್ಚುಮಾಡಿ ಮದರಾಸಿಗೆ ಹೋಗಿದ್ದೆ.

ಶೀಲ: ಅಲ್ಲೇ ಖಾಯಂ ಆಗಿ ನಿಲ್ಲಲಿಲ್ಲವೇಕೆ?

ಮಾಧವಿ: ಅಲ್ಲೆ ನಿಂತರೆ ನಿನ್ನ ಲಗ್ನವಾಗುತಿತ್ತೇ?

ಶೀಲಾ: ಮದರಾಸಿನಲ್ಲಿ ಒಂದು 'ಕೋಲ್ ಕಲರ್' ಹುಡುಗಿಯೊಡನೆ ಲಗ್ನವಾಗಿ ಸುಖದಲ್ಲಿರುತಿದ್ದಿರಿ.

ಮಾಧವಿ: ಏಕೆ ಸುಖ?

ಶೀಲಾ: ಅಲ್ಲಿಯ ಹೆಂಗಸರು ಗಂಡಸನ್ನು ಕೈತುಂಬ ಹೊಡೆದು ಬುದ್ಧಿ ಕಲಿಸುತ್ತಾರೆ

ಮಾಧವಿ: ಎಲ ಎಲ? ಇದನ್ನೆಲ್ಲಿ ನೋಡಿದೆ?

ಶೀಲಾ: ತಮಿಳು ಚಿತ್ರಗಳಲ್ಲಿ!

ಮಾಧವಿ: ಏಯ್! ನಿನಗೆ ನಾನು ಸಾವಿರ ಸಲ ಹೇಳಿದ್ದೇನೆ—ನಾಲ್ಕು ತಾಸು ಓಡುವ ಆ ತಮಿಳು ಬೊಂಬೆ ನೋಡಬೇಡಾ, ಬುದ್ಧಿ ಕೆಡುತ್ತದೆ ಎಂದು! ಅಂಬಡೆ ಕಣ್ಣಿನ ದ್ರೌಪದಿ_ ಕಾಲಿನ ಬದಲಿಗೆ ಮೀಸೆಯ ಬಲದಿಂದ ನಡೆವ ರಾವಣ— ಗಂಡನಿಗೆ ಕಸಬರಿಕೆಯಿಂದ ಹೊಡೆಯುವ ಪತಿವ್ರತೆಯರು— ಆ ಕಸಬರಿಕೆ ಕೆಳಗಿಡು ನೋಡೋಣ!-ಹಣ ಕೊಟ್ಟು ಅದನ್ನು ನೋಡಿ, ಮನೆಗೂ ತರುತ್ತೀರಲ್ಲಾ ಎಂದು!

ಶೀಲಾ: (ಕಸಬರಿಕೆ ಕೆಳಗೆ ಬಿಸಾಡಿ) ನಾವು ನಾಲ್ಕಾಣೆ ಕೊಟ್ಟು ನಾಲ್ಕು ತಾಸು ಅದನ್ನು ನೋಡಿ ಕಲಿಯುತ್ತೇವೆ. ನೀವು ನಾಲ್ಕೂರು ರೂಪಾಯಿ ಖರ್ಚುಮಾಡಿ ಅದನ್ನು ನೋಡಲೀವೆಂದರೆ— ಅಷ್ಟೂ ನಾಪಾಸಾದಿರಲ್ಲವೆ?

ಮಾಧವಿ: ಶುದ್ಧ ಹುಚ್ಚು! ಮದರಾಸಿನಲ್ಲಿ ಗಂಡನಿಗೆ ಹೊಡೆವ ಹೆಂಗಸರೇ ಇಲ್ಲ. ಏಕೆಂದರೆ, ಹೆಂಗಸು ಕೋಲ್ ಕಲರ್ ಆದರೆ ಗಂಡಸು ಡಾಮರ್ ಕಲರ್. ಹೆಂಗಸು ತಮಿಳಿನಲ್ಲಿ ಬಯ್ದರೆ ಗಂಡಸು ತಮಿಳು ಮತ್ತು ಇಂಗ್ಲಿಷ್ ಎರಡೂ ಭಾಷೆ ಸೇರಿಸಿ ಬಯ್ಯುತ್ತಾನೆ. ಮದರಾಸಿನಲ್ಲಿ ರಿಕ್ಷಾದವನಿಗೂ ಇಂಗ್ಲಿಷ್ ಬರುತ್ತದೆ; ಗೊತ್ತೇ?

ಶೀಲಾ: ಮತ್ತೆ ನೀವು ಏನನ್ನು ನೋಡಿದಿರಿ?

ಮಾಧವಿ: ಕೇಳು; ಮದರಾಸಿನಲ್ಲಿ ದೋಸೆ ಮಾರುವ ಒಬ್ಬಳನ್ನು ನೋಡಿದ್ದೇನೆ.

ಶೀಲಾ: ಅಷ್ಟೆ? ದೋಸೆತಿಂದು ಕಾಸುಕೊಡದೆ ಹೋಗುವ ನೂರು ಗಂಡುಗಳನ್ನು ಅದೇ ಊರಿನಲ್ಲಿ ನಾನು ಕಂಡಿದ್ದೇನೆ.

ಮಾಧವಿ: ಸ್ವಲ್ಪ ಸಮಾಧಾನ ತಾಳು! ದೋಸೆ ಮಾರುವ ಆ ದೈವೀಸ್ವಭಾವದ ಹೆಂಗಸು............ಇಷ್ಟು ದೊಡ್ಡ ಕೆಂಪಗಿನ ಬೊಟ್ಟು—ಆ ದೈವೀಸ್ವಭಾವದ ಹೆಂಗಸು, ಬೆಳಗ್ಗೆ ನಾಲ್ಕಕ್ಕೆ ಎದ್ದು, ಬಿಸಿಬಿಸಿ ದೋಸೆ ಹೊಯ್ದು, ಮೊದಲು ಗಂಡನಿಗೆ ನಾಲ್ಕು ದೋಸೆ ಮತ್ತು ಒಂದು ಲೋಟಾ ಕಾಫಿ

ಕೊಟ್ಟು, ಆ ಮೇಲೆ ಸಾವಿರಾರು ದೋಸೆಗಳನ್ನು ನೂರಾರು ಮಂದಿಗೆ ಮಾರುವಳು. ಅವಳ ಪತಿದೇವನು........

ಶೀಲಾ: ಅವಳ ಪತಿಯನ್ನು ದೇವರೆನ್ನುವರೇ? ಯಾರು?

ಮಾಧವ್ಜಿ: ಯಾರು, ಅವಳೇ! – ಅವಳ ಹೃದಯೇಶ್ವರನು, ಆ ಸಾಧ್ವಿಯ ಸ್ವಾಮಿಯು........

ಶೀಲಾ: ಹೆಂಡತಿಯು ವ್ಯಾಪಾರಕ್ಕೆ ತಯಾರಿಸಿರುವ ದೋಸೆಯನ್ನು ತಿನ್ನುವ ಆಸಾಮಿಯು ಸ್ವಾಮಿಯೇ?

ಮಾಧವ್ಜಿ: ಆ ದೋಸೆಸಾನಿಯ ಜೀವನಸರ್ವಸ್ವನು....

ಶೀಲಾ: ಜೀವನಸರ್ವಸ್ವನು ಎನ್ನಿ. ಅವಳನ್ನು ದೋಸೆಸಾನಿ ಎನ್ನುವಿರೇಕೆ?

ಮಾಧವ್ಜಿ: ದೊರೆಸಾನಿ ಎಂದಂತೇ ದೋಸೆಸಾನಿ ಎನ್ನಬಹುದು. ಯಾವ ಪಂಡಿತರ ಆಕ್ಷೇಪವೂ ಇಲ್ಲ

ಶೀಲಾ: ನಿಮ್ಮಂಥವರು ಬರೆಯತೊಡಗಿದರೆ ಎಲ್ಲ ಪಂಡಿತರು ಕನ್ನಡ ಭಾಷೆಯ ವಿಷಯ ಚಕಾರ ಎತ್ತುವುದಿಲ್ಲ ಎಂದು ಆಣೆಯಿಟ್ಟುಕೊಂಡಾರು.

ಮಾಧವ್ಜಿ: ಬರೆಯುವ ಕಾಲ ಬಂದರೆ ಬರೆದೇನು. ಆಣೆ ರೂಪಾಯಿಗಳ ಮಾತು ಬಿಡು. ಬೇಕಾದರೆ ದೋಸೆಸಾನಿಯನ್ನು ದೋಸೆರಾಣಿ ಎನ್ನೋಣ. ಆ ದೋಸೆರಾಣಿಯ ಪ್ರಭುವು ದೋಸೆ ತಿಂದು, ಮೀಸೆ ಹುರಿಮಾಡಿ........

ಶೀಲಾ: ಏಕೆ, ಅವನಿಗೆ ಕ್ಷೌರಕ್ಕೆ ಅವಳೇ ಹಣಕೊಡುವುದಿಲ್ಲವೇ?

ಮಾಧವ್ಜಿ: ತಡೆಯಬೇಡ. ಅವಳ ಕಾಂತನು, ಅವಳು ಹೊಯ್ದುಕೊಟ್ಟ ಹುಣ್ಣಿಮೆಯ ಚಂದ್ರನಂಥಾ ದೋಸೆಗಳನ್ನು ತಿಂದು, ಮೀಸೆ ತಿರುವಿ, ಸುಖಾಸನ ಹಾಕಿ, ತಾಸು ತನಕ ಅಲ್ಲಾಡದೆ ಅಲ್ಲಿ ಕುಳಿತುಕೊಳ್ಳುವನು. ಎರಡು ತಾಸು ಕಳೆಯುತ್ತಲೇ, ದೋಸೆ ಯಜಮಾನಿಯು ತನ್ನ ತಿಲಕನಿಗೆ ಪುನಃ ನಾಲ್ಕು ದೋಸೆ - ಒಂದು ಲೋಟಾ ಕಾಫಿ ಕೊಟ್ಟು ಉಪಚರಿಸುವಳು.

ಶೀಲಾ: ದೇಶದಲ್ಲಿ ಆಹಾರವಿಲ್ಲ ಎನ್ನುತ್ತಾರೆ. ಸರಕಾರದವರು ಆ ವೃಷಭಸ್ವಾಮಿಗೆ ನೇಗಿಲು ಕಟ್ಟಿ ಕೊಂಡೊಯ್ಯಲಿಲ್ಲವೆ?

ಮಾಧವ್ಜಿ: ನೋಡು, ತುಸು ಚಿತ್ರಿಸಿಕೊಳ್ಳು! ದೋಸೆ ಮತ್ತು ಕಾಫಿ, ಕಾಫಿ ಮತ್ತು ದೋಸೆ! ಎಂಥ ಆನಂದಮಯ ಸಂಸಾರ! ಭೂಕೈಲಾಸವೆಂದರೆ ಆ ದೋಸೆಸಾನಿಯ ಮನೆಯೇ ಅಂತ ತಿಳಕೊಂಡೆ.

ಶೀಲಾ: ಸಾಕುಮಾಡಿ! ಇಲ್ಲಿ ಕೇಳಿ. ನೀವು ಈ ದಿನ, ರಾತ್ರೆ ಎಂಟರೊಳಗೆ ಯಾವುದಾದರೂ ಒಂದು ಉದ್ಯೋಗ ನಿಶ್ಚಯಿಸಿಕೊಂಡು ಬಾರದಿದ್ದರೆ ಮತ್ತೆ ನನ್ನನ್ನು ದೂರಬೇಡಿರಿ.

ಮಾಧವ್ಜಿ: ಉದ್ಯೋಗ? ಈ ಸಂಧ್ಯಾಕಾಲದಲ್ಲಿ?

ಶೀಲಾ: ಜೀವನದ ಸಂಧ್ಯಾಕಾಲವಲ್ಲ ತಾನೆ? ಹೂಂ, ಹೊರಡಿರಿ!

ಮಾಧವ್ಜಿ: ಏಯ್, ಐದು ನಿಮಿಷ ಆಲೋಚಿಸು. ದುಡುಕಬೇಡ. ನಿನ್ನಂಥಾ ಪತಿವ್ರತೆ ನೀನೇ ಎಂದು ಈಗ ತಾನೆ ಐದಾರು ಸ್ನೇಹಿತರೊಡನೆ ಹೇಳಿಬಂದಿದ್ದೆನಷ್ಟೆ.

ಶೀಲಾ: ನಿಮ್ಮ ಸ್ನೇಹಿತರೊಡನೆ ನನ್ನ ಹೆಸರೆತ್ತಿದರೆ ಜೋಕೆ!

ಮಾಧವ್ಜಿ: ಇನ್ನು ಹೇಳಿ ಪ್ರಯೋಜನವೇನು? ಸೀತಾ, ತಾರಾ, ಮಂಡೋದರಿ ಮುಂತಾದವರ ಹೆಸರುಗಳನ್ನು ಸ್ಮರಿಸು. ಅವರು ತಮ್ಮ ಗಂಡಂದಿರಿಗೆ ಬಾಗಿಲು ತೋರಿಸಿದ ಉಲ್ಲೇಖ ಎಲ್ಲಿಯೂ ಇಲ್ಲ.

ಶೀಲಾ: ಪವಿತ್ರ ಹೆಸರುಗಳನ್ನು ಉಚ್ಚರಿಸುವ ಅಧಿಕಾರವು ಹೊಲಸು ಬಾಯಿಗಿಲ್ಲ. ಯೋಗ್ಯತೆ ಗಳಿಸಿಕೊಂಡು ಬಂದು, ಮತ್ತೆ ಮಾತಾಡಿ.

ಮಾಧವ್ಜಿ: ನಿನ್ನ ಪತಿಯನ್ನು ಉದ್ಯೋಗದ ರಣರಂಗಕ್ಕೆ ಕಳಿಸುವಿಯಾ?

ಶೀಲಾ: ಈ ವರೆಗಿನ ರಂಗಿನ ರಣಕ್ಕಿಂತ ರಣರಂಗವೇ ವಾಸಿ.

ಮಾಧವ್ಜಿ: ಯಾವ ಉದ್ಯೋಗ ಮಾಡಲಿ, ಅದನ್ನಾದರೂ ಹೇಳು.

ಶೀಲಾ: ಅದನ್ನೂ ನಾನು ಹೇಳಬೇಕೆ? ರಸ್ತೆಯಲ್ಲಿ ಕಲ್ಲೊಡೆವ ಕೆಲಸವಾದರೂ ಆಗಬಹುದು.

ಮಾಧವ್ಜಿ: ನೋಡು, ಈ ತಿಂಗಳು ಒಳ್ಳೆಯದಲ್ಲ. ಬರುವ ತಿಂಗಳಿಗೆ ನೋಡೋಣವೋ ಅಂತ!

ಶೀಲಾ: ತಿಂಗಳ ಮಾತೇ ಇಲ್ಲ. ಈ ದಿನವೇ ನಿಶ್ಚಯವಾಗಬೇಕು.

ಮಾಧವ್ಜಿ: ವಾಯಿದೆ ಕೊಡಲು ಸಾಧ್ಯವೇ ಇಲ್ಲದಿದ್ದರೆ ಹೋಂಟೆ. ಇನ್‌ಕಮ್ ಟೇಕ್ಸ್ ಆಫೀಸಿನವರಿಗಾದರೂ ಕರುಣೆ ಇದೆ, ಇವಳಿಗಿಲ್ಲ ಇರಲಿ. ಈಗ ಒಂದು ಬಟ್ಟಲು ಕಾಫಿಕೊಡು.

ಶೀಲಾ: ಇಲ್ಲಾ ಎನ್ನುತಿದ್ದೆ. ಆದರೆ, ಇಷ್ಟು ವರ್ಷಗಳಿಂದ ನನ್ನ ಹಣೆಯನ್ನು ಕೆಂಪಗೆ ಇರಿಸಿರುವಿರಲ್ಲ!

(ಕಾಫಿ ತರುವಳು)

ಮಾಧವ್ಜಿ: (ಕಾಫಿ ಕುಡಿಯುತ್ತ, ನಿಟ್ಟುಸಿರಿಟ್ಟು)— ನಾವು ಸಾಹುಕಾರಕುಲದವರು. ಈಗ ಅದಕ್ಕೆ, ಕಾರಹೋಗಿ ಸಾವು ಬಂದಂತಿದೆ. (ತೆರೆ)

## ದೃಶ್ಯ ೬

(ರಸ್ತೆ: ತುಕಾಜಿಯ ಪ್ರವೇಶ)

ತುಕಾಜಿ: ದೇವಸ್ಥಾನದಲ್ಲಿ ದೀಪ ಹಚ್ಚುವ ಕೆಲಸವೆಂದರೆ, ಗಿರ್ರನೆ ಕಡ್ಡಿ ಗೀರಿ ನಾಲ್ಕು ದೀಪ ಹಚ್ಚೋದು ಎಂದೆಣಿಸಿದ್ದೆ. ಆದರೆ, ದೀಪಗಳನ್ನು ತೊಳೆಯಬೇಕು— ನೆಲ ಗುಡಿಸಬೇಕು— ಪೂಜಾಸಾಮಗ್ರಿಗಳನ್ನು ಸ್ವಚ್ಛಪಡಿಸಬೇಕು--ದೀಪಗಳಲ್ಲಿ ಎಣ್ಣೆ ಹಾಕಬೇಕು........ಅಂತೂ ನೈವೇದ್ಯ ಮತ್ತು ಆರತಿ ಬಿಟ್ಟು ಉಳಿದೆಲ್ಲ ನನಗೆ. ಈ ಕೆಲಸದ ಗುಟ್ಟು ನನಗೆ ಈಗ ತಿಳಿಯಿತು. ಮುಖ್ಯವಾಗಿ ಮನುಷ್ಯನ ಮುಂಜಾನೆ ಏಳಬೇಕು. ಅಲ್ಲೇ ಉದ್ಯೋಗಶೀಲವು ಆರಂಭವಾಗುತ್ತದೆ, ಲಕ್ಷ್ಮಿಯೊಲಿಯುತ್ತಾಳೆ.

[ಚಂದ್ರಾ, ಕಾಮಾಕ್ಷಿ, ಶೀಲಾ ಮತ್ತು ಚಂಪಾ ಬರುವರು.]

ತುಕಾಜಿ: ಬಂದರಯ್ಯಾ ಹೆಣ್ಣು ರಾಕ್ಷಸಿಗಳು! ಇತ್ತೀಚಿಗೆ ರಸ್ತೆಗಳಲ್ಲಿ ಗೋಮಾತೆಗಳು ಮತ್ತು ಈ ಮನುಷ್ಯ ಮಾತೆಯರೇ ತುಂಬಿ, ನಡೆಯಲಿಕ್ಕೆ ದಾರಿಸಿಕ್ಕುವುದೇ ಕಷ್ಟವಾಗಿದೆ. ಸ್ತ್ರೀಯರಿಗೆ ಪ್ರತ್ಯೇಕ ಸ್ಥಳ ಏರ್ಪಡಿಸಿಯದೆ ಅಂತ ನಾಟಕ ಕಂಪೆನಿಯವರು ಮಾಡಿಟ್ಟಂತೆ ಸ್ತ್ರೀಯರಿಗೆ ಪ್ರತ್ಯೇಕ ಕಾಲ್ದಾರಿ ಅಂತ ಇದ್ದರೆ ನೂರಾರು ಅಪಘಡಗಳನ್ನು ತಡೆಯಬಹುದು ಎಂದು ನನ್ನ ಅಭಿಪ್ರಾಯ. ನಾವು ಮುಂದುವರಿಯುತ್ತೀವೆ ಅವರೇ ಆಕ್ರಮಿಸಿಕೊಳ್ಳಲಿ!

[ಹೋಗುವನು]

ಚಂಪಾ: ಕಾಮಾಕ್ಷಿ, ನಿನ್ನ ಗಂಡನು ತುಕಾರಾಮನ ವೇಷ ಬಿಟ್ಟು ಈಗ ಬಕಾರಾಮನ ಪಾತ್ರ ಧರಿಸಿದ್ದಾನಂತೆ. ಶುಭವಾರ್ತೆ!

ಕಾಮಾಕ್ಷಿ: ಅವರು ಈಗ ಒಳ್ಳೇ ಹಸಿವಿನಿಂದ ಊಟ ಮಾಡುತ್ತಿರುವುದು ನಿಜ. ಪಾಪ, ಮುಂಜಾನೆ ಎದ್ದರೆ ರಾತ್ರಿ ತನಕ ಸುತ್ತಾಡಿ ಕೆಲಸ ಮಾಡಿಕೊಂಡು, ದಣಿದು ಬರುತ್ತಾರೆ.

ಚಂದ್ರಾ: ಅಯ್ಯೋ ಪಾಪ, ಗಂಡನ ಬಗ್ಗೆ ಕನಿಕರ ನೋಡಬಾರದೆ!

ಶೀಲಾ: ಮತ್ತೆ, ನೀನೊಬ್ಬಳು ಗಂಡನ ವಿಷಯ ಬಾಯಿ ಬಿಟ್ಟು ಮಾತಾಡುವುದಿಲ್ಲ—ಆದರೆ, ಮನಸ್ಸಿನಲ್ಲಿ ಪ್ರೇಮವಿದೆಯೋ ಇಲ್ಲಾ?

ಚಂಪಾ: ಅಹುದೇ ಚಂದ್ರಾ, ನೀನು ಕಾಮಾಕ್ಷಿಗೆ ಹೇಳಿದ ಮಾತು ಶೀಲಾಳಿಗೂ ತಗಲಿತು. ಅವಳ ಗಂಡನ ವಿಷಯ ಬಹುಶಃ ಅವಳ ಕರುಳೂ ಕತ್ತರಿಸುತ್ತಿದೆ. (ಶೀಲನನ್ನುದ್ದೇಶಿಸಿ) ಶೀಲಾ, ನಿನ್ನ ಗಂಡನಿಗ ಯಾವ ಕೆಲಸ?

ಶೀಲಾ: ಅವರು ಹೇಳಿಲ್ಲ. ಸಾಯಂಕಾಲ ಮನೆಗೆ ಬಂದು, ಸ್ನಾನಮಾಡಿ ಊಟಮಾಡಿದ ಅನಂತರವೇ ಅವರಿಗೆ ಸ್ವರ ಹೊರಡುತ್ತದೆ. ಬಹಳ ಆಯಾಸಗೊಂಡು ಬರುತ್ತಾರೆ.

ಚಂದ್ರಾ: ಅಂತೂ ತುಕ್ಕು ಹಿಡಿದು ಮೂಲೆಗೆಸೆಯಲ್ಪಟ್ಟ ಎರಡು ಯಂತ್ರಗಳು ಹೇಗೂ ಕೆಲಸಕ್ಕಾರಂಭಿಸಿದುವು–ಅಲ್ಲವೆ?

ಕಾಮಾಕ್ಷಿ: ಅಷ್ಟು ಕೀಳಾಗಿ ಸಂಬೋಧಿಸಬೇಡ. ಉದ್ಯೋಗ ಮಾಡುವವರನ್ನು ಯಂತ್ರಗಳೆನ್ನುವಿರಾದರೆ ನಿನ್ನ ಗಂಡನೂ ಒಂದು ಯಂತ್ರ ನೋಡು.

ಚಂದ್ರಾ: ನೋಡು ಚಂಪಾ, ಗಂಡನು ಉದ್ಯೋಗಶೀಲನಾದರೆ ಹೆಂಡತಿಯಲ್ಲಿ ಎಂಥ ಅಭಿಮಾನ ಉಕ್ಕೇರುವುದು ನೋಡು!

ಚಂಪಾ: ಕಾಮಾಕ್ಷಿ, ನಿನ್ನ ಗಂಡನ ಭಜನೆ ಈಗ ನಿನ್ನ ಮೂರ್ತಿಯ ಮುಂದೆಯೇ ಮಿತಗೊಂಡಿದೆಯೋ ಅಥವಾ ಊರು ತುಂಬ ಹಾಡುತ್ತ ಹೋಗುವ ಪದ್ಧತಿ ಇದೆಯೋ!

ಕಾಮಾಕ್ಷಿ: ಅದೇನೇ ಹಾಗೆ ಕೇಳುತ್ತಿ? ಅವರು ಎಷ್ಟಾದರೂ ಗಂಡಸು. ಸಂಗೀತಪ್ರಿಯರಾದ್ದರಿಂದ ಕೀರ್ತನೆಯನ್ನು ಹಾಡಿದರೆ ದೋಷವೇನು?

ಶೀಲಾ: ಪುರುಷರು ಸಾವುಹೆಚ್ಚಿಕೊಂಡು ಬೇಕಾದಷ್ಟು ತಾಳ ಹಾಕಿ ಕುಣಿದರೆ ಅಷ್ಟೊಂದು ಟೀಕೆಗೆ ಗುರಿಯಾಗುವುದಿಲ್ಲ. ಸ್ತ್ರೀಯರು ಒಂದು ಹೊಸ ಸೀರೆ ಉಟ್ಟರೆ ನಿಮಿಷಾರ್ಧದಲ್ಲಿ ಒಂದು ಮೈಲು ವಿಸ್ತೀರ್ಣದಲ್ಲಿ ಗುಜುಗುಜು ಏಳುತ್ತದೆ. ಕೈಬೀಸಿ ನಡೆದರೆ ದೊಡ್ಡ ಧ್ವನಿಯಲ್ಲಿ ಟೀಕೆಗೆ ಗುರಿಯಾಗುತ್ತಾರೆ. ಕೀರ್ತನೆ ಹೇಳಿ ಜನರನ್ನಾಕರ್ಷಿಸಿದರಂತೂ ಜಗತ್ಪ್ರಲಯವಾದಂತೆ ಎಲ್ಲರೂ ಭಯಪಡುತ್ತಾರೆ. ಇದೇಕೆ?

ಚಂದ್ರಾ: ಟೀಕೆ ಮಾಡುವವರು ಪುರುಷರಷ್ಟೆ? ಪುರುಷನಲ್ಲಿ, ತಾನು ಸ್ತ್ರೀಗಿಂತ ದೈಹಿಕವಾಗಿಯೂ ಮಾನಸಿಕವಾಗಿಯೂ ಶ್ರೇಷ್ಠನು ಮತ್ತು ತಾನೇ ಸ್ತ್ರೀಯನ್ನು ಆಳತಕ್ಕವನು ಎಂಬೊಂದು ಭಾವನೆಯು ಸುಪ್ತವಾಗಿರುತ್ತದೆ. ಅದರಿಂದಾತನು ಬೋಧಕನ ಪಾತ್ರ ವಹಿಸುತ್ತಾನೆ. ತಾನು ಅನಾಚಾರ ಮಾಡಿದರೂ ಅದು ಪುರುಷಪ್ರಕೃತಿಸಹಜವೆಂದು ಅವನ ಅಭಿಪ್ರಾಯ. ಪುರುಷರ ದುಷ್ಕೃತ್ಯಗಳನ್ನು ನಿಷೇಧಿಸುವಾಗ ಅವನಲ್ಲಿ ಅತಿವರ್ಜತೆಯಿದೆ. ಸ್ತ್ರೀಯನ್ನು ಟೀಕಿಸುವಾಗ, ಅವನು ತಡೆದಿರಿಸಿದ ಅತಿ ಕಾಂಕ್ಷೆಗಳು, ಸೇಡಿನ ರೂಪದಲ್ಲೊಂಬಂತೆ ಪ್ರವಹಿಸುತ್ತವೆ.

ಚಂಪಾ: ಸ್ತ್ರೀಯಾಗಲಿ ಪುರುಷನಾಗಲಿ,—ಸಂತರೆಂಬ ಮೇಲೆ ಅವರಲ್ಲಿ ಲೈಂಗಿಕತೆಯನ್ನು ಕಾಣುವವರೇ ಹೆಚ್ಚು. ಅದೇಕೆ?

ಚಂದ್ರಾ: ತರುಣ ಸಂತರೂ ಭಜಕ ತರುಣಿಯರೂ ಪ್ರಾಚೀನಕಾಲದಿಂದಲೂ ವಿರುದ್ಧ ವರ್ಗದ ಪರಸ್ಪರ ಆಕರ್ಷಣವಾಗಿರುವರು. ಬಹಿರಂಗವಾಗಿ ಜನರು ಅವರನ್ನು ಮುತ್ತುತ್ತಲೇ ನಿಂದೆಗಡೆಯಾಗುತ್ತಿದೆ. ನಿಷೇಧಿಸುವವರೆಲ್ಲರೂ ನಿಷ್ಪಾಪಿಗಳೆಂಬ ಅರ್ಥವಲ್ಲ.

ಶೀಲಾ: ಇನ್ನೊಂದು ವಿಚಾರ. ತನ್ನನ್ನು ತಾನೇ ನೋಡಿಕೊಳ್ಳಲಾರದವನು, ಮದುವೆಯಾಗಿ, ಹೆಂಡತಿಯು ಹೆರಿಗೆಯ ಯಂತ್ರವೆಂದು ಭಾವಿಸಿ ಹತ್ತೆಂಟು ಮಕ್ಕಳ ತಂದೆಯಾದರೆ, ಅಂಥವನನ್ನು ಟೀಕಿಸುವವರಿಲ್ಲ. ಎಷ್ಟೊಂದು ಚಲೋ ಹೆಣ್ಣುಗಳು ತಾರುಣ್ಯದಲ್ಲೆ ಸೌಂದರ್ಯವನ್ನು ಕಳಕೊಂಡಿರುವರು! ಎಷ್ಟೊಂದು ಹೆಣ್ಣುಗಳು ಕ್ಷಯರೋಗಕ್ಕೆ ಬಲಿಯಾಗಿರುವರು! ಅವರನ್ನು ಕೊಲ್ಲುವ ಅಧಿಕಾರವು ಕೂಡ ಪುರುಷರಿಗಿದೆ. ಈ ಅನಾಚಾರಗಳನ್ನು ತಡೆವವರಿಲ್ಲವೆ?

ಚಂದ್ರಾ: ಹೆಣ್ಣುಗಳು ವಿದ್ಯಾವತಿಯರಾಗಬೇಕು. ವಿದ್ಯೆ ಎಂದರೆ ಕೇವಲ ಶಾಲಾ ಶಿಕ್ಷಣವಲ್ಲ. ಅವರ ನೈತಿಕಮಟ್ಟವು ಉಚ್ಚವಿರುವಂತೆ ಬೋಧೆ ಬೇಕು.

ಕಾಮಾಕ್ಷಿ: ನಡೀರಿ, ಹೋಗೋಣ. ಸಾಯಂಕಾಲವಾಗುತ್ತಾ ಬಂತು. ನಮಗೆ ದೂರ ಹೋಗಬೇಕಾಗಿದೆ.

(ಹೋಗುವರು)

## ದೃಶ್ಯ ೭

(ಗುಡ್ಡ ಅಥವಾ ಉಪವನದ ದೃಶ್ಯ. ಮಾಧವ್ಜಿ ಒಂದು ಗುದ್ದಲಿ ಹಿಡಿದು ನಿಂತಿರುವನು.)

ಮಾಧವ್ಜಿ: (ಸ್ವ) ನಾವು ಸಾಹುಕಾರ ಕುಲದವರು!

ಮೊದಲು ನಮ್ಮ ಮನೆತನದ ಹೆಸರು ಸುಪಾರಿ ಶೇಟ್‌ರು ಅಂತ. ಈಗ ರಸ್ತೆ ರಿಪೇರಿ ಶೇಟ್ ಅಂತ ಹೇಳಿಸಿಕೊಳ್ಳುವ ಕಾಲ ಬಂತು.

ಐದಾರು ಶತಮಾನಗಳಿಂದ ನಮ್ಮ ಮನೆತನದಲ್ಲಿ ಒಬ್ಬ ಗಂಡಸಾದರೂ ಯಾವ ಕೆಲಸವನ್ನು ಮಾಡಿದ ದಾಖಲೆಯೂ ಇಲ್ಲ. ಈಗ ನಾನೊಬ್ಬನು ಮಾತ್ರ ಕಳ್ಳೀ ಗಿಡದ ಹಾಗೆ ಬಿಸಿಲಲ್ಲೆ ಬೆಳೆಯುತಿದ್ದೇನೆ.

ಮೊದಲು ನಮ್ಮ ಮೈಬಣ್ಣ—ಹಳದಿ ವರ್ಣ. ಈಗ--ಚೊಕಲೇಟ್ ರಂಗು.

ಮೊದಲು ನಾವು ಶರ್ಬತ್--ಕಾಫಿ--ಮಸಾಲೆಹಾಲು--ಬಾದಾಮಿ ಖೀರುಗಳನ್ನು ಕುಡಿಯುತಿದ್ದೆವು. ನಮ್ಮ ಒಂದೊಂದು ತೇಗು ಅರ್ಧ ಮೈಲು ದೂರಕ್ಕೆ ಹುಲಿ ಗರ್ಜನೆಯಂತೆ ಕೇಳಿಸುತಿತ್ತು. ಈಗ ಬರೇ ನೀರು ಕುಡಿಯುತಿದ್ದೇವೆ.

ಆ ಕಾಲದಲ್ಲಿ ನಮ್ಮ ವಸ್ತ್ರದ ಬಣ್ಣ ಸುಣ್ಣದ ಹಾಗೆ ಶುಭ್ರವಾಗಿತ್ತು. ಈಗ ಕಾಫಿಕಲರ್.

ಕೆಲಸಮಾಡುವ ಧೈರ್ಯವೇ ನಮಗಿಲ್ಲ. ಎಲ್ಲ್ಯಾದರೂ ಕೈಕಾಲು ಮುರಿದು ಹೋದೀತೋ ಎಂಬ ಭಯ. ಆದರೆ, ಮನಸ್ಸು ಮಾಡಿದರೆ ಯಾವ ಕೆಲಸವನ್ನೂ ಮಾಡಲು ಶಕ್ತರು ಎಂಬುದಕ್ಕೆ ಈ ಗುದ್ದಲಿಯೇ ಸಾಕ್ಷಿ.

ಹಾಯ್! ಹೊಟ್ಟೆ ಎಂಬೊಂದು ಅವಯವ ಮತ್ತು ಅನ್ನ ಎಂಬ ಒಂದು ವಸ್ತು ಇದೆಯಲ್ಲ! ದೇವರ ಸೃಷ್ಟಿಯಲ್ಲಿ ಇದಕ್ಕಿಂತ ವಿಚಿತ್ರ ವಸ್ತುವೇ ಇಲ್ಲ.

(ನಿಟ್ಟುಸಿರು ಬಿಡುತ್ತ) ಅಲ್ಲ,- ಅಗೆದರೆ ಕೊಪ್ಪರಿಗೆ ಸಿಗುತ್ತದೆ ಅನ್ನುತಿದ್ದರು. ನಾನು ಅಗೆದ ಲೆಕ್ಕ ನೋಡಿದರೆ ಹತ್ತಿಪ್ಪತ್ತು ಕೊಪ್ಪರಿಗೆಗಳಾದರೂ ಸಿಕ್ಕಬೇಕಿತ್ತು. ನನಗೆ ಮಾತ್ರ, ದಿನಕ್ಕೆರಡು ರೂಪಾಯಿ ಸಿಕ್ಕುತ್ತದೆ. ಸದ್ಯಃ ಅದನ್ನೆ ಕೊಪ್ಪರಿಗೆ ಎಂದು ತಿಳಕೊಂಡಿದ್ದೇನೆ.

(ತುಕಾಜಿಯ ಪ್ರವೇಶ)

ತುಕಾಜಿ: ಯಾರು, ಮಾಧವ್ಜಿ, ಸುಪಾರಿ ಶೇಟ್?

ಮಾಧವ್ಜಿ: ಈಗ ಪಾಪಾರಿ ಶೇಟ್! ಎಲ್ಲ ಸ್ಥಳಗಳನ್ನು ಬಿಟ್ಟು ಇಲ್ಲಿಗೂ ಬಂದಿರಾ?

ತುಕಾಜಿ: ನಮ್ಮ ಕಡೆ ಹೋಗುವ ಅಡ್ಡದಾರಿ ನೋಡಿ ಇದು. ಇಲ್ಲೆ ಏನು ಮಾಡುತ್ತಿರುವಿರಿ?

ಮಾಧವ್ಜಿ: ಯಾವ ಕೆಲಸವೂ ಸಿಕ್ಕಲಿಲ್ಲವೆಂದು ರಸ್ತೆ ಅಗೆಯುವ ಕೆಲಸ ಕೈಕೊಂಡೆ. ದೂರದ ಸ್ಥಳದಲ್ಲಿ ಹೊಸ

ರಸ್ತೆ ಗುಡಿಯುತ್ತಾರೆಂತ ಕೇಳಿ ಸ್ವಲ್ಪ ಸಮಾಧಾನವಾಯಿತು. ಇಲ್ಲಿ ಯಾರೂ ನೋಡುವ ಹಾಗಿಲ್ಲ. ಸಾಹುಕಾರ ಕುಲದವರು ಸಾವ್ಕಾರಗಿರಿ ಬಿಟ್ಟು ಆಕಸ್ಮಿಕವಾಗಿ ರಸ್ತೆ ರಿಪೇರಿಗೆ ಇಳಿಯೋದೆಂದರೆ ಸ್ವಲ್ಪ ಆಶ್ಚರ್ಯ ನೋಡಿ.

ತುಕಾಜಿ: ಅಮೇರಿಕದಲ್ಲಾದರೆ ವರ್ತಮಾನ ಪತ್ರಿಕೆಯಲ್ಲಿ ನಿಮ್ಮ ಹೆಸರು, ಚಿತ್ರಸಮೇತ ಪ್ರಕಟವಾಗುತಿತ್ತು.

ಮಾಧವ್ಜಿ: ಅಮೇರಿಕದಲ್ಲಾದರೆ ಸರಿ ಇಲ್ಲಿ ಸ್ವಲ್ಪ ಗುಟ್ಟಾಗಿ ಈ ಕೆಲಸ ಮಾಡಬೇಕು ನೋಡಿ.

ತುಕಾಜಿ: ಮನುಷ್ಯನು ಮೊದಲು ಮಿಥ್ಯಾಭಿಮಾನ ಬಿಡಬೇಕು. ಉದ್ಯೋಗದ ಗೌರವವನ್ನು ತಿಳಿಯಬೇಕು

ಮಾಧವ್ಜಿ: ಯಾವ ಕೆಲಸವೂ ಆಗಬಹುದು-- ಈ ರಸ್ತೆ ಕೆಲಸವಲ್ಲ ತುಕಾಜಿ. ಬಿಸಿಲಿಗೆ ಅಗೆದು ಅಗೆದು ದಣಿದಾಗ, ನಾವು ತೋಡಿದ ಹೊಂಡದಲ್ಲಿ ನಾವೇ ಮಲಗಿ ಬಿಡೋಣ ಅನಿಸುತ್ತದೆ.

ತುಕಾಜಿ: ನಡುಹಗಲಲ್ಲಿ ರಸ್ತೆ ಅಗೆವಲ್ಲಿ ದೇವರಿದ್ದಾನೆಂದು ಠಾಕೂರರು ಹೇಳಿರುವರು.

ಮಾಧವ್ಜಿ: ಠಾಕೂರರು ಹೇಳಿದ್ದನ್ನು ಅಷ್ಟು ಭಕ್ತಿ ಮತ್ತ ಪೂಜ್ಯಭಾವದಿಂದ ಉಚ್ಚರಿಸುವವರು, ದೇವಸ್ಥಾನಕ್ಕೆ ಹೋಗುವುದನ್ನು ಬಿಟ್ಟು ಇಲ್ಲಿಗೇ ಬರಬಾರದೇ?

ತುಕಾಜಿ: ಬಂದಿದ್ದೇವಲ್ಲ!

(ಕಾಮಾಕ್ಷಿ ಮತ್ತು ಶೀಲಾಳ ಪ್ರವೇಶ)

ಕಾಮಾಕ್ಷಿ: ನೋಡು ಶೀಲಾ, ನಿನ್ನ ಗಂಡನಲ್ಲವೆ? ರಸ್ತೆ ಅಗೆಯುತ್ತಿರುವನು.

ಶೀಲಾ: (ಆಶ್ಚರ್ಯ,ದುಃಖಗಳಿಂದ) ಸ್ವಾಮಿ, ಏನಿದು!

ಮಾಧವ್ಜಿ: ಉದ್ಯೋಗ! ಕೊನೆಗಾದರೂ ನನ್ನನ್ನು 'ಸ್ವಾಮಿ' ಎಂದು ಸಂಬೋಧಿಸಿದೆಯಲ್ಲ!

ಶೀಲಾ: ನಾನು ಒಂದು ಮಾತಿಗೆ 'ರಸ್ತೆ ಅಗೆಯುವ ಕೆಲಸವೂ ಆಗಬಹುದು' ಎಂದುದಕ್ಕೆ ಅದನ್ನೆ ಕೈಕೊಂಡಿರಾ?

ಕಾಮಾಕ್ಷಿ: ಒಳ್ಳೆ ಉದ್ಯೋಗ! ಕೃಷಿಯಾದರೂ ಆಗಬಹುದಿತ್ತು! ವ್ಹಾ!

ತುಕಾಜಿ: ಏನೇ, ಏ ಪಟಾಕಿ ನಾಯಕಿ! ನಾಲಗೆ ವಿಪರೀತ ಚಾಚಬೇಡ!

ಕಾಮಾಕ್ಷಿ: ಏನು, ನೀವು ದುಡುಕುವಿರಿ?

ತುಕಾಜಿ: ದುಡಿಯುವ ಗಂಡ ನಾನು, ದುಡುಕುತ್ತೇನೆ! ಮಾಧವ್ಜಿಯೂ ಹಾಗೇ. ನ್ಯಾಯವಾದ ಯಾವ ಶ್ರಮವೂ ಗೌರವಪೂರ್ಣವಾದುದು.

ಕಾಮಾಕ್ಷಿ: ರಸ್ತೆ ದುರುಸ್ತಿ ಕೂಡಾ?

ತುಕಾಜಿ: ಅದು ಕೂಡಾ! ಏಕೆ, ನೀನೇ ಹೇಳುತ್ತಿರಲಿಲ್ಲವೇ, ಕಟ್ಟಿಗೆ ಒಡೆವ ಕೆಲಸವೂ ಆಗಬಹುದೆಂದು? ನೀನು ಕುಣಿದು ಹೋಗುವ ರಸ್ತೆಯನ್ನು ಯಾರಾದರೂ ಮೆತ್ತಗೆ

ನೋಡಬೇಡವೇ? ಮನುಷ್ಯರೇ ಅವುಗಳನ್ನು ತಯಾರಿಸಬೇಕು ತಾನೇ?

ಶೀಲಾ: (ಮಾಧವ್ಜಿಗೆ) ಬನ್ನಿರಿ, ಮನೆಗೆ ಹೋಗೋಣ.

ಮಾಧವ್ಜಿ: ಇನ್ನೂ ಆರು ಘಂಟೆ ಆಗಿಲ್ಲ. ನಮ್ಮ ಮೇಸ್ತ್ರಿ ಬಂದು ಹಣ ಕೊಟ್ಟ ನಂತರ ನಾನು ಹೊರಡಬೇಕು.

ಶೀಲಾ: ನೀವು ಈ ರೀತಿ ಕೆಲಸ ಮಾಡಿದರೆ ಬೇನೆ ಬೀಳಲಾರಿರಾ?

ಮಾಧವ್ಜಿ: ಯಾರಿಗೆ ಗೊತ್ತು? ನಿನ್ನೆ ಮೊನ್ನೆ ಸ್ವಲ್ಪ ಕೈನೋಯುತ್ತಿತ್ತು. ಈ ದಿನ ಆಯಾಸ ಕಡಿಮೆ.

ತುಕಾಜಿ: (ಶೀಲಳಿಗೆ) ಏ ಅಮ್ಮಾ! ಜನ್ಮಕ್ಕೆ ಕೆಲಸ ಮಾಡದವನು ನಿಮ್ಮ ಪೂರ್ವ ಪುಣ್ಯಸಂಚಿತದಿಂದ ಈಗ ಕೆಲಸಕ್ಕಿಳಿದಾಗ, ಅವರನ್ನು ವಿಮುಖರಾಗಿ ಮಾಡುವ ಯತ್ನ ಮಾಡಬೇಡಿ. ಉತ್ಸಾಹ ಕೊಡುವವರೂ ನೀವು-ನಿರುತ್ಸಾಹಗೊಳಿಸುವವರೂ ನೀವೇ ಆದೀರಲ್ಲ!

ಕಾಮಾಕ್ಷಿ: ಓಹೋ, ಭಾರೀ ತತ್ತ್ವಜ್ಞಾನಿಗಳಾಗಿರುವಿರಲ್ಲ!

ತುಕಾಜಿ: ಸುಮ್ಮನಿರೇ ಎಟಂಬಾಂಬ್ ನಾರಿ!

ಶೀಲಾ: (ಮಾಧವ್ಜಿಗೆ) ನೀವು ನಾಳೆ ತೈಲಾಭ್ಯಂಗ ಮಾಡಬೇಕು. ಈ ಮೊದಲು ದೀಪಾವಳಿಗೆ ಮಾತ್ರ ಸ್ನಾನ ಮಾಡಿದ ಹಾಗೆ ಇನ್ನು ನಡೆಯದು.

ತುಕಾಜಿ: (ತನ್ನ ಹೆಂಡತಿಗೆ) ಏನೇ,—ನನಗೂ ಹಾಗೇ ಹೇಳು ಒಮ್ಮೆ!

ಕಾಮಾಕ್ಷಿ: ನಿಮಗೆ ದೇವಸ್ಥಾನದಲ್ಲಿ ಎಣ್ಣೆದ್ದೇ ಕೆಲಸ ತಾನೇ? ಬರುವಾಗ ಅಲ್ಲೇ ಸ್ನಾನಮಾಡಿಕೊಂಡು ಬನ್ನಿ!—ಬಾರೇ ಶೀಲಾ, ಹೋಗೋಣ.

[ಕಾಮಾಕ್ಷಿ ಶೀಲಾ ಹೊರಡುವರು]

[ಪರದೆ]

## ದೃಶ್ಯ ೮

[ರಸ್ತೆ: ತುಕಾಜಿಯ ಪ್ರವೇಶ]

ತುಕಾಜಿ: ಉದ್ಯೋಗಂ ಪುರುಷ ಲಕ್ಷಣಂ ಅಂತ! ಈಗ ನಾನು ಲಕ್ಷಣವಂತ ಪುರುಷ. ನನ್ನ ಸ್ನೇಹಿತ ಮಾಧವ್ಜಿ ಮಾತ್ರ— ಉದ್ಯೋಗವಿದ್ದರೂ ಲಕ್ಷಣವಿಲ್ಲ. ಮತ್ತೆ, ಸುಮ್ಮ ಸುಮ್ಮನೆ ಶ್ರಮದ ಗೌರವದ ಮಾತೆತ್ತಿದೆ ಅವನೊಡನೆ. ಹಾಗೆ ಹೇಳಿದರೆ, ರಸ್ತೆ ಅಗೆದು ಬಾಸುಂಡೆ ಎದ್ದ ಅವನ ತೋಳುಗಳಿಗೆ ಸ್ವಲ್ಪ ಮುಲಾಮು ಹಚ್ಚಿದ ಹಾಗಾಗುತ್ತದೆ. ನಾನು ನಿಜಕ್ಕೂ ಭಾಗ್ಯಶಾಲಿ! ಈಗ ಕೆಲಸವಾಗಿ ಮೂರು ತಿಂಗಳಾಯಿತು. ಹೊಸ ಪಂಚೆ, ಹೊಸ ಶರ್ಟು, ಹೊಸ ಕೊಡೆ ಬಂತು. ಇನ್ನೆರಡು ತಿಂಗಳಲ್ಲಿ ಕೈಗೆ ಒಂದು ರಿಸ್ಟ್ ವಾಚ್ ಕಟ್ಟಬೇಕೂಂತ ಇದ್ದೇನೆ. ಎಡ ಕೈಗೆ ರಿಸ್ಟ್‌ವಾಚ್

ಕಟ್ಟಿ ದೀಪಕ್ಕೆ ಎಣ್ಣೆ ಹೊಯ್ದು ಉರಿಸುವಾಗ ಠೀವಿ ಜಾಸ್ತಿ.

[ಮಾಧವ್ಜಿಯ ಪ್ರವೇಶ. ಸೇಟ್ ಹಾಕಿ, ಹೇಟ್ ಇಟ್ಟು ಬರುವನು.]

ಮಾಧವ್ಜಿ: ಹಲ್ಲೋ (Hallo) ತುಕಾಜಿ!

ತುಕಾಜಿ: (ಬೆರಗುಗೊಂಡು) ಮಾಧವ್ಜಿ ಶೇಟ್? ವ್ಹಾರೆ ವ್ಹಾ! ಏನಿದು ವೇಷ? ಹಾರಿ-ಪಿಠ್ಯಾಸು-ಕಾವಿ ವಸ್ತ್ರ ಎಲ್ಲಿ?

ಮಾಧವ್ಜಿ: 'ಜೀ'ಯು ಅಲ್ಲ— ಶೇಟ್ ಕೂಡ ಅಲ್ಲ. ಬರೀ ಮಾಧವ ರಾವ್? ವೇಷಗೀಷ ಸಾದಾ! ಹಾರಿ ಮತ್ತು ಕಂಪೆನಿ ಮಾರಿಬಿಟ್ಟೆ.

ತುಕಾಜಿ: ಮತ್ತೇನು ಮಾಡುತ್ತೀರಿ?

ಮಾಧವ್ಜಿ: ಈಗ ನಾನು ಪತ್ರಿಕೆಯ ಉಪಸಂಪಾದಕ.

ತುಕಾಜಿ: ಭಾಪುರೇ! ಜಗತ್ತಿನ ಎಂಟನೇ ಆಶ್ಚರ್ಯ! ಯಾವ ಪತ್ರಿಕೆ?

ಮಾಧವ್ಜಿ: "ಉದ್ಯೋಗ" ಅಂತ.

ತುಕಾಜಿ: ಮಾಧವ್ಜೀ, ಏನು ಭಾಗ್ಯ ನಿಮ್ಮದು! ರಸ್ತೆಯ ಮೇಲಿದ್ದವರು ಉಪ್ಪರಿಗೆಗೆ ಏರಿಹೋದಿರಲ್ಲ! ನಾನು ಮಾತ್ರ ಎಷ್ಟು ದೀಪ ಹಚ್ಚಿದರೂ ನನಗೆ ದೇವರು ಪ್ರತ್ಯಕ್ಷನಾಗಲಿಲ್ಲ ನೋಡಿ!

ಮಾಧವ್ಜಿ: ನೀವೇ ಮೊದಲು ನನಗೆ ಹೇಳಿರುವಿರಿ-ಶ್ರಮದ ಗೌರವ ಅಂತ! ದೇವಸ್ಥಾನದ ದೀಪಗಳನ್ನು ಹಚ್ಚುವವರ ಬೆರಳುಗಳಲ್ಲಿ ದೇವರಿರುವನು ಎಂದು ಠಾಕೂರರು ಹೇಳಿಲ್ಲವೆ

ತುಕಾಜಿ: ಇಲ್ಲ. 'ಉದ್ಯೋಗ'ದಲ್ಲಿ ನನ್ನ ವಿಷಯ ಎರಡು ಪಂಕ್ತಿ ಬರೆದು ಬಿಡುತ್ತೀರಾ?

ಮಾಧವ್ಜಿ: ಚಿತ್ರ ಸಹಿತ ಪ್ರಕಟಿಸುತ್ತೇನೆ.

ತುಕಾಜಿ: ಮತ್ತೆ ಆಗಾಗ್ಗೆ ದೇವಾಲಯಕ್ಕೆ ಬರಲ ಮರೆಯಬೇಡಿ. ಸಂಪಾದಕರಾದ ಮೇಲೆ ಮನುಷ್ಯರಿಗೆ ಗವ ಜಾಸ್ತಿ.

ಮಾಧವ್ಜಿ: ಛೇ, ಹಾಗೇನೂ ಇಲ್ಲ. ಗರ್ವ ಬಂ ಕೂಡಲೇ ನಾನು ನಿಮಗೆ ತಿಳಿಸುತ್ತೇನೆ. ನನ್ನನ್ನು ಎಚ್ಚರಿ ಬಹುದು.

ತುಕಾಜಿ: ಅದು ತಮಗೆ ಗೊತ್ತಾಗುತ್ತದೆಯೇ?

ಮಾಧವ್ಜಿ: ತಮಗೆ ಗೊತ್ತಾಗುವುದಲ್ಲ! ನೋಡಿ, ಈ ಗರ್ವ ಬಂದಿದೆಯೇ?

ತುಕಾಜಿ: (ಮಾಧವ್ಜಿಯನ್ನ ದಿಟ್ಟಿಸಿ) ಇಲ್ಲ. ಈಗ ಅಸ್ವಸ್ಥ ಕಾಣುವುದಿಲ್ಲ. ನಿಮಗೆ ಚುಟುಕಾಗಿ 'ಗರ್ವ' ಎಂಬ ಮಹಾರೋಗದ ಲಕ್ಷಣಗಳನ್ನು ಹೇಳುತ್ತೇನೆ. ಮೊದಲಾಗಿ, ಬಡ ಸ್ನೇಹಿತರನ್ನು ಕಂಡರೆ ನಗು ಮಾಯವಾಗುವುದು; ಮೇಲೆ ಮಾತೇ ನಿಂತುಹೋಗುವುದು; ಮೂರನೇ ಅಂಕ ಕಣ್ಣು ಮುಚ್ಚಿಕೊಂಡು ನಡೆಯೋದು; ನಾಲ್ಕನೆ ಅಂಕ-ದಾ

ಯಲ್ಲಿ ಎದುರಾದರೂ, ಪರಿಚಯವಿಲ್ಲದೆ ಎದೆಯುಬ್ಬಿಸಿ ಹೋಗೋದು.

ಮಾಧವಿ: ಆ ಮೇಲೆ?

ತುಕಾಜಿ: ಆ ಮೇಲೆ ಐದನೇ ಅಂಕ,–ಕಾಲಿನಿಂದ ನಡೆಯೋದನ್ನು ಮರೆತು, ತಲೆಯಿಂದ ನಡೆಯಲಿಕ್ಕೆ ಹೋಗಿ, ದಡಮ್ಮನೆ ಬಿದ್ದು ತಲೆ ಬಡಕೊಳ್ಳುವುದು. ಅದು ಕಡೇ ಅಂಕ.

ಮಾಧವಿ: (ನಗುತ್ತ) ಇಷ್ಟೆಲ್ಲ ಗರ್ವ ಎಂಬ ರೋಗದ ಐದು ಲಕ್ಷಣಗಳು ಅಲ್ಲವೆ? ಇರಲಿ. ಆ ಮೊದಲಿನ ಲಕ್ಷಣ ಕಾಣಿಸಿಕೊಳ್ಳದ ಹಾಗೆ ಎಚ್ಚರವಿದ್ದರೆ ಅಪಾಯವಿಲ್ಲ ತಾನೆ?

ತುಕಾಜಿ: ಚೂರೂ ಇಲ್ಲ. ಹಂಗೇ ಮಾಡಿ.

(ಹೋಗುವರು)

## ದೃಶ್ಯ ೯

[ಮಾಧವಿಯ ಮನೆಕೋಣೆ. ಮೇಜು–ಕುರ್ಚಿಗಳಿವೆ. ಶೀಲಾ, ಮೇಜಿಗೆ ವಸ್ತ್ರ ಹಾಸುತ್ತಾ ಹೂ ಪಾತ್ರೆ ತಂದಿಟ್ಟು, ಕುರ್ಚಿಗಳನ್ನೊರಸುತ್ತ, ಹಾಡುತ್ತಿರುವಳು. ಬಿಳೀ ಸೀರೆ ಉಟ್ಟುಕೊಂಡಿರುವಳು ]

[ಮಾಧವಿಯ ಪ್ರವೇಶ]

ಮಾಧವಿ: ಶೀಲಾ!

ಶೀಲಾ: ಬಂದಿರಾ? ತಡವೇನು?

ಮಾಧವಿ: (ಕುರ್ಚಿಯಲ್ಲಿ ಕುಳಿತು) ನಮ್ಮೂರಲ್ಲಿನ ಒಂದು ಹೊಸ ಉದ್ಯಮದ ಕುರಿತು ಮಾಹಿತಿ ಸಂಗ್ರಹಿಸಲು ಹೋಗಿದ್ದೆ. ಆ ಕೆಲಸವನ್ನು ಮುಗಿಸಿಕೊಂಡೇ ಬಂದೆ.

ಶೀಲಾ: ಯಾವ ಉದ್ಯಮ?

ಮಾಧವಿ: ಗಾಜಿನ ಮತ್ತು ಪಿಂಗಾಣಿಪಾತ್ರೆ ತಯಾರಿಸುವ ಎರಡು ಕೈಗಾರಿಕೆಗಳು.

ಶೀಲಾ: ಅದನ್ನು ಇಲ್ಲಿ ತಯಾರಿಸಬಹುದೇ?

ಮಾಧವಿ: ತಯಾರಿಸದೆ ಏನು? ನಮ್ಮ ಜಿಲ್ಲೆಯಲ್ಲಿ ಹಲವು ಹೊಸತಾದ ಜನೋಪಯೋಗೀ ಕೈಗಾರಿಕೆಗಳನ್ನು ಆರಂಭಿಸಲು ಸಾಧ್ಯವಿದೆ ಶೀಲಾ! ಆದರೆ, ಆ ಕಡೆ ಮುಂದುವರಿಯುವವರು ಕಡಿಮೆ. ಬಂಡವಾಳಗಾರರು ಹೊಸ ಉದ್ಯಮದಲ್ಲಿ ಧೈರ್ಯಪಟ್ಟುಕೊಳ್ಳುವುದಿಲ್ಲ. ಒಂದು ಒಳ್ಳೇ ದೈನಿಕ ಪತ್ರಿಕೆಯನ್ನು ಹೊರಡಿಸಲು ಕೂಡಾ ಹಣ ಕೊಡುವವರಿಲ್ಲ

ಶೀಲಾ: ನಮ್ಮೂರ ಹಂಚು ಕೈಗಾರಿಕೆ ಪ್ರಸಿದ್ಧವಲ್ಲವೆ?

ಮಾಧವಿ: ಅಹುದು, ಆದರೆ, ಅದನ್ನಾರಂಭಿಸಿದವರು ಜರ್ಮನರು.

ಶೀಲಾ: ಪೌರಾಲಿಕವಾದುದು ಮತ್ತೇನೂ ಇಲ್ಲವೆ?

ಮಾಧವಿ: ಇದೆ........ಆದರೆ........

ಶೀಲಾ: ಆದರೇನು?

ಮಾಧವಿ: ಇನ್ನೊಮ್ಮೆ ಹೇಳುವೆನು. ಈಗ ನಾನು ಬಲು ದಣಿದಿರುವೆ. ಒಂದು ಕಪ್ ಚಹ ತಂದುಕೊಡು.

ಶೀಲಾ: ಈಗಲೇ ತಂದೆ. (ಹೋಗಿ, ತರುವಳು)

ಮಾಧವಿ: (ಚಹ ಕುಡಿಯುತ್ತ) ಶೀಲಾ, ಮೂರು ತಿಂಗಳ ಹಿಂದೆ, ಇದೇ ಸ್ಥಳದಲ್ಲಿ ಹರಕು ಮಂಚದ ಮೇಲೆ ಕುಳಿತು, ನಾನು ನಿನ್ನೊಡನೆ ನಿಶ್ಯಕ್ತಳಾಗಿ ಒಂದಾಣೆ ಕೇಳಿದ ನೆನಪು ಬರುತ್ತದೆ.

ಶೀಲಾ: ಹೋಗಲಿ, ಬಿಡಿ. ಅದನ್ನು ಮೇಲುಕುಹಾಕುವುದೇಕೆ? ನಿಮ್ಮೊಡನೆ ಅಣೆ ಇರಲಿಲ್ಲ—ಕೇಳಿದಿರಿ.

ಮಾಧವಿ: ಅಲ್ಲ ಶೀಲಾ, ಅದನ್ನು ನೆನೆದರೆ ಮೈ ಝುಮ್ಮೆನ್ನುತ್ತದೆ. ಇದೇ ಬಾಯಿಂದ ಕೇಳಿ, ಇದೇ ಕೈಯಿಂದ ತೆಗೆದುಕೊಂಡಿದ್ದೆನಲ್ಲ!.... ಮತ್ತು, ಶೀಲಾ, ಉದ್ಯೋಗವಿಲ್ಲದ ಮನುಷ್ಯನ ಮಾತೂ ಎಷ್ಟು ಕೀಳಾಗುತ್ತದೆ! ಅವನ ಜ್ಞಾನವೂ ಎಷ್ಟು ಮಸುಕಾಗುತ್ತದೆ!

ಶೀಲಾ: ಆ ದಿನಗಳು ಹೋದುವಲ್ಲ. ಉಪಯೋಗಕ್ಕೆ ಬಾರದ ಆ ಅಹಿತ ಸ್ಮರಣೆಯೇಕೆ?

ಮಾಧವಿ: ಶೀಲಾ, ಹಿಂದಿನ ನನ್ನ ಒಂದು ಮಾತು ಆಗಾಗ್ಗೆ ನನ್ನ ಕಿವಿಯೊಳಗೆ ಧ್ವನಿಸುವುದುಂಟು.

ಶೀಲಾ: ಯಾವ ಮಾತು?

ಮಾಧವಿ: "ನಾವು ಸಾಹುಕಾರ ಕುಲದವರು"—ಎಂಬುದು.

ಶೀಲಾ: ಈಗಲೂ ಅದೇ ಕುಲವಲ್ಲವೆ?

ಮಾಧವಿ: ಶೀಲಾ,—ನನ್ನ ಅಂದಿನ ಮಾತುಗಳು ನನಗೇ ನಾಚಿಕೆ ಮತ್ತು ಬೇಸರವನ್ನುಂಟುಮಾಡುವುದಾದರೆ, ಹಲವು ವರ್ಷಗಳಿಂದ ನಿತ್ಯವೂ ಕೇಳಿ ಕೇಳಿ—ಆ ಮೇಲೆಯೂ ನನ್ನನ್ನು ಸಲಹಿಕೊಂಡಿದ್ದ ನಿನ್ನ ಸೈರಣೆಗೆ ಎಣೆಯುಂಟೇ ಶೀಲಾ?

ಶೀಲಾ: ನಾನು ಸಾಮಾನ್ಯ ಸ್ತ್ರೀಯಂತೆ ನಡಕೊಂಡಿರುವೆನು. ಅದರಲ್ಲೇನು ವಿಶೇಷ!

ಮಾಧವಿ: ಶೀಲಾ, ನಿನ್ನ ಸೈರಣೆ ಮತ್ತು ತ್ಯಾಗಗಳನ್ನು ಸಾಮಾನ್ಯವೆಂದು ತಿಳಿವ ನಿನ್ನ ಅಂತರ್ಯವು ಅಸಾಮಾನ್ಯ! ಎಲ್ಲ ಪುರುಷರು ಸ್ತ್ರೀಯರ ಸಹನೆಯನ್ನರಿತು ಉದಾರರಾದರೆ, ದೇಶವೂ ಉದ್ಧಾರವಾಗುವುದಲ್ಲವೆ? ಜಗತ್ತಿನ ಮಾತೃಗಳು ಮತ್ತು ಭಗಿನಿಯರು ಯಾರ ಅಂಶಜರಾಗಿರುವರೋ ಆ ಸರಸ್ವತೀದೇವಿಯು ನಮ್ಮೆಲ್ಲರಿಗೆ ಬೆಳಕನ್ನು ಕೊಡಲಿ!

[ಮಂಗಲ ಪದ: ಸರಸ್ವತಿಸ್ತುತಿ; ಆ ಮೇಲೆ "ಜನಗಣಮನ"]

ಸಂಪೂರ್ಣ

ಸ್ಥಾಪಿತ: 1935.

# ಪ್ರಭಾತ

ರಜತೋತ್ಸವ ವರ್ಷ: 1959.

ಕನ್ನಡ ವಾರ ಪತ್ರಿಕೆ, ರಥಬೀದಿ, ಮಂಗಳೂರು-1.

ವಾರ್ಷಿಕ ಚಂದಾ:

ಸ್ಥಳೀಯರಿಗೆ — ರೂ. ೬-೦೦.

ಪರಸ್ಥಳೀಯರಿಗೆ — ರೂ. ೭-೦೦.

ಬಿಡಿ ಸಂಚಿಕೆ — ಎರಡಾಣೆ (೧೨ ನಯೆ ಪೈಸೆ)

ಪ್ರಭಾತ—ರಥಬೀದಿ—ಮಂಗಳೂರು-೧.

ಫೋನ್: 728.

# ಒಂದಾಣೆ ಮಾಲೆ.

ವಾರಕ್ಕೊಂದು ಹೊಸ ಪುಸ್ತಕ ಹೊರಡುತ್ತಿರುವ, ಕರ್ನಾಟಕದ ಈ ಏಕಮಾತ್ರ ಪುಸ್ತಕ ಮಾಲೆಯಲ್ಲಿ 1959ನೇ ಜುಲೈ ವರೆಗೆ 250 ಪುಸ್ತಕಗಳು ಪ್ರಕಟವಾಗಿವೆ.

ಪ್ರತಿಯೊಂದು ಪುಸ್ತಕವು ವಿದ್ಯಾರ್ಥಿಗಳಿಗಾಗಲಿ ಪ್ರೌಢರಿಗಾಗಲಿ ಅತ್ಯುಪಯುಕ್ತವಾಗಿವೆ.

ಬೋಧಪ್ರದವಾದ ಸಣ್ಣ ಕಥೆಗಳು, ತತ್ಸಮ-ತದ್ಭವ ಕೋಶ, ಕರ್ಣಾಟಕ ಕವಿ ಚರಿತ್ರೆ, ಪೌರಾಣಿಕ ಹಾಗೂ ಸಾಮಾಜಿಕ ಏಕಾಂಕ ನಾಟಕಗಳು, ಮನೆಮದ್ದು, ಕ್ಷೇತ್ರಗಳ ಪರಿಚಯ, ಮಹಾ ಪುರುಷರ ದಿವ್ಯವಾಣಿ, ಶ್ರೀ ಶಂಕರಾಚಾರ್ಯರ 'ವಿವೇಕವಾಣಿ'ಯ ಸಾರಾಂಶ, ಕೇನೋಪನಿಷತ್ತು, ಈಶಾವಾಸ್ಯೋಪನಿಷತ್ತು, ಚಾಣಕ್ಯ ಶತಕ, ಭರ್ತೃಹರಿಯ ನೀತಿಶತಕ,-ಹೀಗೆ ಹಲವಾರು ಪುಸ್ತಕಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ.

'ಒಂದಾಣೆ ಮಾಲೆ'ಯು ಬಹು ವಿಶಾಲಕ್ಷೇತ್ರದಿಂದ ಆರಿಸಿ ತನ್ನ ಪ್ರಕಟಣೆಗಳನ್ನು ರೂಪಿಸಿ ಓದುಗರ ಮುಂದಿಡುತ್ತಿದೆ.

ಒಂದಾಣೆ ಮಾಲೆ—ಪ್ರಭಾತ ಆಫೀಸು—ರಥಬೀದಿ—ಮಂಗಳೂರು.

ಪ್ರಭಾತ ಪ್ರಿಂಟರ್ಸ್, ಲಿ., ಮಂಗಳೂರು.